# ಭಾಗ್ಯಲಕ್ಷ್ಮಿ

## ವನಿತೆಯರ ಪಾಲಿಗೆ ವರದಾನ

ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನಕ್ಕೆ ಹೆಚ್ಚಿನ ಮನ್ನಣೆ ದೊರಕಿಸಿಕೊಡುವ ಸದುದ್ದೇಶದಿಂದ ಕರ್ನಾಟಕ ಸರ್ಕಾರವು ಕೈಗೊಂಡಿರುವ ಮಹತ್ವದ ಯೋಜನೆ-ಭಾಗ್ಯಲಕ್ಷ್ಮಿ. ಬಡತನದ ರೇಖೆಗಿಂತ ಕೆಳಗಿನ ಕುಟುಂಬದಲ್ಲಿ 31ನೇ ಮಾರ್ಚ್ 2006ರ ನಂತರ ಜನಿಸಿದ ಇಬ್ಬರು ಹೆಣ್ಣುಮಕ್ಕಳಿಗೆ, ಅವರು 18 ವರ್ಷ ವಯಸ್ಸು ತಲುಪಿದಾಗ ರೂ. 1,00,000/-ವನ್ನು ನೀಡುವುದು ಈ ಯೋಜನೆಯ ಸಾರಾಂಶ.

### ಯೋಜನೆಯ ಮುಖ್ಯಾಂಶಗಳು

- **2006-07ನೇ ಸಾಲಿನಲ್ಲಿ ನೋಂದಾಯಿತರಾದ ಫಲಾನುಭವಿಗಳಿಗೂ ರೂ. 10,850/- ಠೇವಣಿ.**
- **2007-08ನೇ ಸಾಲಿನಲ್ಲಿ ನೋಂದಾಯಿತರಾದ ಫಲಾನುಭವಿಗಳಿಗೂ ರೂ.20,000/-ಠೇವಣಿ. 2008-09ನೇ ಸಾಲಿಗೆ ಇದನ್ನು ಇಮ್ಮಡಿಗೊಳಿಸಲಾಗಿದೆ.**
- **31ನೇ ಮಾರ್ಚ್ 2006ರ ನಂತರ ಬಿಪಿಎಲ್ ಕುಟುಂಬದಲ್ಲಿ ಜನಿಸಿದ ಎರಡು ಹೆಣ್ಣುಮಕ್ಕಳು ಈ ಯೋಜನೆಗೆ ಅರ್ಹರು. ಆ ಕುಟುಂಬ 3ಕ್ಕಿಂತ ಹೆಚ್ಚು ಮಕ್ಕಳನ್ನು ಹೊಂದಿರಬಾರದು.**
- **ಒಂದನೇ ತರಗತಿಯಿಂದ ಹತ್ತನೆಯ ತರಗತಿಯವರೆಗೆ, ರೂ.300/-ರಿಂದ ರೂ. 1000/-ವರೆಗಿನ ವಾರ್ಷಿಕ ವಿದ್ಯಾರ್ಥಿವೇತನ**
- **18 ವರ್ಷ ವಯಸ್ಸಿನವರೆಗೂ ರೂ. 25,000/-ದಷ್ಟು ಆರೋಗ್ಯವಿಮೆ.**
- **ದುಡಿಯುತ್ತಿರುವ ತಂದೆ, ತಾಯಿ ಅಥವಾ ಪೋಷಕರ ಸಾವು ಸಂಭವಿಸಿದಲ್ಲಿ ರೂ. ಒಂದು ಲಕ್ಷದವರೆಗೆ ಕುಟುಂಬ ವಿಮೆ.**

### ಸ್ತ್ರೀ ಸಬಲೀಕರಣಕ್ಕೆ ವಿನೂತನ ಕ್ರಮ


ಕರ್ನಾಟಕ ವಾರ್ತೆ

# ನಮ್ಮ ಮಾನಸ

**ಸೆಪ್ಟೆಂಬರ್ 2010**
ಸಂಪುಟ : 4 ಸಂಚಿಕೆ : 5

*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 9449345698*

*Printed at*
***ILA Mudrana***
*No. 36, 40 Ft. Road, Raghavanagara,*
*New Timberyard Layout*
*Bangalore-26.*
*✆ : 26757159*

*ಸಂಪಾದಕ ಮಂಡಳಿ*
**ಚಂಪಾವತಿ ಹೆಚ್.ಎಸ್., ಸವಿತಾ ಎ.**
**ವೆಂ. ವನಜಾ, ಗೀತಾ, ಎಚ್.ಎಸ್. ಪುಷ್ಪಾ.**

*ಸಲಹೆ – ಸಹಕಾರ*
**ಇಳಾ ವಿಜಯಾ, ಸುಮಿತ್ರಾಬಾಯಿ ಬಿ.ಎಸ್.**

*ಮಾನಸ ಬಳಗ*
**ತಸ್ನೀಂ ತಾಜ್, ವೇದವಲ್ಲಿ ಜಿ.ವಿ.**
**ವತ್ಸಲ ವೈ.ಎನ್., ಶ್ಯಾಮಲ, ತಾಜುಮಾ**

*ಚಂದಾ ವಿವರ*

| | |
|---|---|
| **ಬಿಡಿಪ್ರತಿ** | **8–00 ರೂ.** |
| **ವಾರ್ಷಿಕ ಚಂದಾ** | **100–00 ರೂ.** |
| (ವಿಶೇಷ ಸಂಚಿಕೆಯೊಂದಿಗೆ) | |
| **ಸಂಸ್ಥೆಗಳಿಗೆ** | **150–00 ರೂ.** |

## ನಮ್ಮ ಮಾನಸ

114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ, ಬೆಂಗಳೂರು – 560 018

*ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ ಡಿ.ಡಿ. ಮೂಲಕ ಕಳಿಸಬಹುದು*

– – –

***ಮೈಸೂರಿನಲ್ಲಿ ಓದುಗರು ಪ್ರತಿಗಳಿಗೆ ಹಾಗೂ ಚಂದಾ ನವೀಕರಣಕ್ಕೆ ಸಂಪರ್ಕಿಸಿ***

**ವೆಂ. ವನಜ**

*2329, 12ನೇ ಮೈನ್, 2ನೇ ಹಂತ,*
*ವಿಜಯನಗರ, ಮೈಸೂರು – 570 017*

**ಪ್ರಾರಂಭ : 'ಮಾನುಷಿ' (1985ರಲ್ಲಿ),**
**ಅನಂತರ 'ಮಾನಸ',**
**ಈಗ 'ನಮ್ಮ ಮಾನಸ'**




ಸಂಪಾದಕೀಯ

# ಮಹಿಳೆಗೆ ಹಂಗಿಲ್ಲದ ಆಯ್ಕೆಯ ಸ್ವಾತಂತ್ರ್ಯ ಇರಬೇಕು...

ಮಹಿಳಾ ಚಳವಳಿಯ ತಾತ್ತ್ವಿಕ ದೃಷ್ಟಿಕೋನದಲ್ಲಿ ಬಹುಮುಖೀ ಸಂಸ್ಕೃತಿಯ ಅಸ್ತಿತ್ವ ಪ್ರಧಾನಪಾತ್ರ ವಹಿಸುತ್ತದೆ. ಅದು ಕುಟುಂಬ, ಜೀವನಶೈಲಿ, ಲೈಂಗಿಕ ಪ್ರಕ್ರಿಯೆ, ಆಚಾರ, ವಿಚಾರ, ಉಡುಪು – ಇದ್ಯಾವುದಕ್ಕೂ ಸಂಬಂಧಿಸಿದ್ದಿರಬಹುದು. ಮಹಿಳೆಯ 'ಆಯ್ಕೆ'ಗೆ ಮಹಿಳಾ ಚಳವಳಿ ಆದ್ಯತೆ ನೀಡುತ್ತದೆ. ಆಕೆಯ ಸ್ವಾತಂತ್ರ್ಯ, ಶೀಲ, ಕ್ರಿಯಾಶೀಲ ವ್ಯಕ್ತಿತ್ವ ರೂಪಿಸಿಕೊಳ್ಳುವಲ್ಲಿ ಹೆಣ್ಣಿಗೆ 'ಆಯ್ಕೆ' ಪ್ರಶ್ನೆ ಮುಖ್ಯ ಎಂಬುದು ಮಹಿಳಾ ಚಳವಳಿಯ ನಿಲುವು. ಕೆಲವೊಂದು ಸಾಮಾಜಿಕ, ರಾಜಕೀಯ ಸಂದರ್ಭದಲ್ಲಿ 'ಆಯ್ಕೆ' ಸಾಧ್ಯವೇ ಎಂಬ ಪ್ರಶ್ನೆಯನ್ನೂ ನಾವು ಗಂಭೀರವಾಗಿಯೇ ಚರ್ಚಿಸಬೇಕಾಗುತ್ತದೆ.

ಕುಂದಾಪುರದಲ್ಲಿ ಸಾರ್ವಜನಿಕವಾಗಿ ಮುಸ್ಲಿಂ ಮಹಿಳೆಯರು ಬುರ್ಖಾ ಧರಿಸಿಯೇ ಬರಬೇಕೆಂದು ಮೂಲಭೂತವಾದಿಗಳು ವ್ಹಿಪ್ ಕೊಟ್ಟಿದ್ದಾರೆ. ಇದರ ವಿರುದ್ಧ ತಿರುಗಿ ಬಿದ್ದ ರೆಹಿನಾ ಎಂಬ ಮುಸ್ಲಿಂ ಮಹಿಳೆ ಸಾಂಪ್ರದಾಯಿಕ ಕಟ್ಟಳೆಯ ವಿರುದ್ಧ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಿದ್ದಾಳೆ. ಬಾಂಗ್ಲಾದ ರಾಣಿ ಭಾಮನಿ ಮಹಿಳಾ ಕಾಲೇಜಿನಲ್ಲಿ **'ಬುರ್ಖಾ ಧರಿಸದೇ ವಿದ್ಯಾರ್ಥಿನಿಯರು ಕಾಲೇಜು ಪ್ರವೇಶಿಸುವಂತಿಲ್ಲ'** ಎಂಬ ಸೂಚನೆ ನೀಡಲಾಗಿತ್ತು. ಈ ಬಗ್ಗೆ ಮಾಧ್ಯಮಗಳು ಬೆಳಕು ಚೆಲ್ಲಿದ ಹಿನ್ನೆಲೆಯಲ್ಲಿ–ಶಾಲಾ, ಕಾಲೇಜು ಮತ್ತು ಕಚೇರಿಗಳಲ್ಲಿ ಕೆಲಸ ನಿರ್ವಹಿಸುವ ಮಹಿಳೆಯರು ಮತ್ತು ವಿದ್ಯಾರ್ಥಿನಿಯರಿಗೆ ಕಡ್ಡಾಯವಾಗಿ ಬುರ್ಖಾ ಧರಿಸುವಂತೆ ಒತ್ತಾಯಿಸುವ ಅಗತ್ಯವಿಲ್ಲ ಎಂದು ಮುಸ್ಲಿಂ ಗಣರಾಜ್ಯವಾದ ಬಾಂಗ್ಲಾದೇಶದಲ್ಲಿ ನ್ಯಾಯಾಲಯ ವೊಂದು ಸರ್ಕಾರಕ್ಕೆ ಸೂಚನೆ ನೀಡಿದೆ. ಢಾಕಾದ ಹೈಕೋರ್ಟಿನ ವಿಭಾಗೀಯ ಪೀಠ ಈ ಆದೇಶ ನೀಡಿದೆ. ಧಾರ್ಮಿಕತೆಯನ್ನು ಬಿಂಬಿಸುವ ಉಡುಪು ಅಥವಾ ಬುರ್ಖಾ ಧರಿಸುವಂತೆ ಶೈಕ್ಷಣಿಕ ಸಂಸ್ಥೆಗಳು, ಕಚೇರಿಗಳಲ್ಲಿ ವ್ಯಾಸಂಗ ಮಾಡುವ ಅಥವಾ ಕೆಲಸ ಮಾಡುವ ಮಹಿಳೆಯರಿಗೆ ಒತ್ತಾಯಿಸುವಂತಿಲ್ಲ. ಜುಲೈ 13, 2010 ಫ್ರಾನ್ಸ್‌ನ ಲೋವರ್ ಹೌಸ್ ಆಫ್ ಪಾರ್ಲಿಮೆಂಟ್‌ನಲ್ಲಿ ಸಾರ್ವಜನಿಕ ಪ್ರದೇಶಗಳಲ್ಲಿ ಮುಖ ಮುಚ್ಚುವಂತೆ ಬುರ್ಖಾ ಧರಿಸಿಕೊಂಡು ಓಡಾಡುವುದನ್ನು ನಿಷೇಧಿಸುವ ಕಾನೂನಿನ ಮಸೂದೆಗೆ ಬಹುಮತ ದೊರಕಿದೆ. ಮುಖ ಮುಚ್ಚುವಂತೆ ಬುರ್ಖಾ ಅಥವಾ ವೇಲ್ ಧರಿಸುವುದು ಫ್ರೆಂಚ್ ರಿಪಬ್ಲಿಕ್‌ನ ಸೆಕ್ಯುಲರಿಸಂ ತತ್ವಗಳಿಗೆ ವಿರೋಧ ವಾಗಿರುವುದರಿಂದ ಹಾಗೂ ಹೀಗೆ ಧರಿಸುವುದು ಮಹಿಳೆಯ ಶೋಷಣೆಯ ಸಂಕೇತ ಹಾಗೂ ಮೂಲಭೂತವಾದಿತ್ವ ಅಂತರ್ಗತವಾಗಿರುವ ನಡವಳಿಕೆ ಎಂದು ವಾದಿಸಿ ಬುರ್ಖಾ ನಿಷೇಧದ ಮಸೂದೆಗೆ ಫ್ರೆಂಚ್ ಸರ್ಕಾರ ಸಹಿ ಹಾಕಲಿದೆ.

ಬುರ್ಖಾ ದಾಸ್ಯದ ಸಂಕೇತ! ಧಾರ್ಮಿಕತೆಯನ್ನು ಬಿಂಬಿಸುವ ಸಾಂಪ್ರದಾಯಿಕ ಕಟ್ಟುಪಾಡು ಎಂಬುದು ನಿಜ ಗ್ರಹಿಕೆ. ನವವಸಾಹತು ರಾಜಕೀಯದ ಸಂದರ್ಭದಲ್ಲಿ ಮುಂದುವರಿದ ಪ್ರಾಚ್ಯ ದೇಶಗಳಲ್ಲಿ ಬುರ್ಖಾ ಆಧುನಿಕತೆಯ ಸಂಕೇತವಾಗಿ ಮಹಿಳೆಯರಿಗೆ ಕಂಡಿದ್ದರೆ, ತಾಲಿಬಾನೀಕರಣದ ರಾಷ್ಟ್ರಗಳಲ್ಲಿ ಬುರ್ಖಾ ಧರಿಸುವುದು ಹೆಣ್ಣುಮಕ್ಕಳಿಗೆ ರಕ್ಷಣೆಯ ವಿಧಾನವಾಗಿ ಕಂಡಿದ್ದರೆ ಆಶ್ಚರ್ಯವೇನಿಲ್ಲ. ಈ ಸಮುದಾಯಗಳಲ್ಲಿಯೇ ಅರಿವು, ಪ್ರಜ್ಞೆ, ಶಿಕ್ಷಣದ ಮೂಲಕ ಒಂದು ಚಿಂತನೆ ಮೂಡಬೇಕು. ಬುರ್ಖಾ ಧರಿಸುವ ಅಥವಾ ಧರಿಸದಿರುವ ಬಗ್ಗೆ ಕಟ್ಟಾಜ್ಞೆಗಳು, ಪ್ರಭುತ್ವದ ಒತ್ತಡಗಳು ಮೂಲಭೂತವಾದಿಗಳ ಅವಕಾಶವಾದಿ ರಾಜಕಾರಣಕ್ಕೂ ದಾರಿ ಮಾಡಿಕೊಡಬಹುದಾದ ಸಂದರ್ಭಗಳೇ ಹೆಚ್ಚು. ಬಹಳ ಹಿಂದೆಯೇ ಪಂಜಾಬಿನ ಪ್ರಾಂತವಾದ ಪಾಣಿಪತ್‌ನಲ್ಲಿ ಸೂಫಿ ಸಾಹಿತ್ಯದ ಪ್ರಭಾವದಿಂದಾಗಿ, ಅದರ ಮೌಖಿಕ ಪ್ರಚಾರದಿಂದಾಗಿಯೇ ಬಹಳ ಜನ ಮುಸ್ಲಿಂ ಮಹಿಳೆಯರು ಬುರ್ಖಾ ಧರಿಸುವುದನ್ನು ಸ್ವ–ಇಚ್ಛೆಯಿಂದಲೇ ನಿಲ್ಲಿಸಿದ್ದರು. ಉತ್ತರ ಕರ್ನಾಟಕದ ಗ್ರಾಮೀಣ ಪ್ರದೇಶಗಳಲ್ಲಿಯೂ ಕೂಡಾ ಇಂದಿಗೂ ಬುರ್ಖಾ ಧರಿಸದೇ ಓಡಾಡುವ ಹೆಣ್ಣುಮಕ್ಕಳೇ ಹೆಚ್ಚು. ಶಿಕ್ಷಣ, ಪ್ರಜ್ಞಾವಲಯದ ವಿಸ್ತರಣೆ, ವ್ಯಕ್ತಿತ್ವದ ಹೊರಮುಖ ಚಾಲನೆ ಇಂತಹವುಗಳು ಹೆಚ್ಚಾಗದ ಹೊರತು ನಿಷೇಧ, ಕಟ್ಟಾಜ್ಞೆಗಳು ವೈಪರೀತ್ಯ ಎನ್ನಿಸುವಂಥ ಪ್ರತಿಕ್ರಿಯೆಗಳನ್ನೇ ಹುಟ್ಟು ಹಾಕಬಹುದು. ಹಾಗಾಗಿ ಭಾರತದ ಮಹಿಳಾ ಚಳವಳಿ ಇಂತಹ ವಿಚಾರಗಳಲ್ಲಿ ಸಂವೇದನಾಶೀಲವಾಗಿಯೇ ಪ್ರತಿಕ್ರಿಯಿಸಿರುವುದು ಸ್ಪಷ್ಟವಾಗಿದೆ.

## ಒಳಗಿನ ಪುಟಗಳಲ್ಲಿ....



ಕೆಲವು ಸಂಕೇತಗಳು ಧಾರ್ಮಿಕ ಸಂಪ್ರದಾಯಗಳ ಒತ್ತಡಗಳಾಗಿರುವುದರಿಂದ ಭಾರತದ ಮಹಿಳಾ ಚಳವಳಿ ಪ್ರಾರಂಭದ ದೆಸೆಯಲ್ಲಿ ಇವುಗಳನ್ನು ನಿರಾಕರಣೆ ಮಾಡಿದುದು ನಿಜ. ಆದರೆ ನೀವಿದನ್ನು ಧರಿಸಲೇಬೇಕು ಅಥವಾ ಧರಿಸಲೇಬಾರದು ಎಂಬ ಕಟ್ಟಾಜ್ಞೆಯ ರೀತಿಯ ನಿಲುವನ್ನು ಭಾರತದ ಮಹಿಳಾ ಚಳವಳಿ ಎಂದಿಗೂ ತೆಗೆದುಕೊಂಡಿಲ್ಲ. "ಏನು ನಾನೇನು ಬಳೆ ತೊಟ್ಕೊಂಡಿದೀನಾ?" ಎಂಬಂತಹ ಸಾಮಾನ್ಯ ಹೇಳಿಕೆಗಳಲ್ಲಿ ಬಳೆಯನ್ನು ಹೇಡಿತನಕ್ಕೆ, ಹೆಣ್ಣಿಗೆ ಹೋಲಿಸುವ ಪ್ರವೃತ್ತಿ ಇದೆ. ಹೆಣ್ಣನ್ನು ಅಬಲೆಯಾಗಿ ಚಿತ್ರಿಸುವ ಸಾಂಪ್ರದಾಯಿಕ, ಧಾರ್ಮಿಕ ಚಿತ್ರಣಗಳು ಪ್ರಜ್ಞೆಗೆ ಕುಕ್ಕಿದಾಗ, ತಾಳಿ, ಕುಂಕುಮಗಳೆಲ್ಲ ಮುತ್ತೈದೆಯ ಸೌಭಾಗ್ಯ ಎಂದು ಹೆಣ್ಣನ್ನು ಮುತ್ತೈದೆಯಾಗಿ ಕುಟುಂಬಿನಿಯಾಗಿ ವಿಜೃಂಭಿಸಿದಾಗ 'ಇವು ನನ್ನ ಇಚ್ಛೆಯಲ್ಲ, ಇದು ನನ್ನ ವ್ಯಕ್ತಿತ್ವವೂ ಅಲ್ಲ' ಎಂದು ಪ್ರಜ್ಞಾವಂತ ಮಹಿಳೆ ನಿರ್ಧರಿಸಿದರೆ ಅದು ಆಕೆಯ ಸ್ವಾತಂತ್ರ್ಯ, ಹಕ್ಕು. ಅಥವಾ ಇನ್ನೊರ್ವ ಮಹಿಳೆ 'ಇವುಗಳು ನನಗೆ ಒತ್ತಡದ ಸಂಕೇತಗಳಲ್ಲ, ನನಗೆ ಅಲಂಕಾರ, ಸೌಂದರ್ಯವರ್ಧಕಗಳು' ಎಂದು ನಿರ್ಧರಿಸಿದರೆ ಅದು ಆಕೆಯ ಆಯ್ಕೆ. ಮಹಿಳಾ ಚಳವಳಿಯು ಯಾವುದನ್ನೂ ಮಹಿಳೆಯ ಆಯ್ಕೆಗೆ ಬಿಡಬೇಕು ಎನ್ನುತ್ತದೆ. ಆದರೆ ನಾವು ಬದುಕುತ್ತಿರುವ ರಾಜಕೀಯ, ಸಾಮಾಜಿಕ, ಧಾರ್ಮಿಕ ಸನ್ನಿವೇಶಗಳಲ್ಲಿ ಯಾವುದರ ಹಂಗಿಲ್ಲದ 'ಆಯ್ಕೆ' ಎನ್ನುವುದು ಸಾಧ್ಯವೇ ಎನ್ನುವುದನ್ನು ಮೊದಲೇ ಹೇಳಿದ ಹಾಗೆ ಚರ್ಚೆ ಮಾಡಬೇಕಾದ ವಿಚಾರವಾಗುತ್ತದೆ.

ಇಂದು ಅನೇಕ ಕಾಲೇಜು, ಸ್ಕೂಲ್‌ಗಳಲ್ಲಿ 'ಡ್ರಸ್‌ಕೋಡ್'ಅನ್ನು ಹೇರಲಾಗುತ್ತಿದೆ. ಪಠ್ಯಗಳಲ್ಲಿ ಕೇಸರೀಕರಣದ ಪ್ರಯತ್ನಗಳು ನಡೆಯುತ್ತಿವೆ. ಇವುಗಳನ್ನೆಲ್ಲ ರಾಜಕೀಯ ಹುನ್ನಾರಗಳು ಎಂದೇ ನಾವು ಭಾವಿಸಬೇಕಾಗುತ್ತದೆ. ಮಂಗಳೂರಿನಲ್ಲಿ ಹಾಗೂ ಬೆಂಗಳೂರಿನಲ್ಲಿ ಪ್ಯಾಂಟ್ ಧರಿಸುವ ಹೆಣ್ಣುಮಕ್ಕಳ ಮೇಲೆ ದಾಳಿ ನಡೆಸಲಾಗಿತ್ತು. ದಾಳಿಕೋರರಿಗೆ ಪ್ಯಾಂಟ್ ಪಾಶ್ಚಿಮಾತ್ಯೀಕರಣದ ಸಂಕೇತ ಎನಿಸಿದರೆ ಅದು ಅವರ ಮಾನಸಿಕ ಆರೋಗ್ಯದ ಪ್ರಶ್ನೆ. ಇದನ್ನು ರಾಜಕೀಯ ಪ್ರೇರಿತ ಉದ್ದೇಶಗಳಿಂದ ಒಂದು 'ವಿಚಾರಧಾರೆ'ಯನ್ನಾಗಿಸಿ, ಈ ವಿಚಾರಧಾರೆಯ ಪ್ರಕಾರ ಭಾರತೀಯ ಹೆಣ್ಣಾಗಿ ಸೀರೆ, ಕುಂಕುಮ, ಬಳೆಗಳಲ್ಲಿಯೇ ಎಲ್ಲಾ ಮಹಿಳೆಯರೂ ಕಾಣಿಸಿಕೊಳ್ಳಬೇಕೆಂಬ ಮೂಲಭೂತವಾದಿ ತತ್ವಗಳಿಗೆ ಫರ್ಮಾನ್ ಹೊರಡಿಸಿದರೆ, 'ಆಯ್ಕೆ'ಯ ಸ್ವಾತಂತ್ರ್ಯದ ಪ್ರಶ್ನೆಗಳನ್ನೆತ್ತಿ ಮಹಿಳೆಯರು ತಿರುಗಿ ಬೀಳುವುದು ಸಹಜ.

ಭೈರಪ್ಪನವರ 'ಕವಲು' ಕಾದಂಬರಿಯಲ್ಲಿಯೂ ಸಹ ಇಂತಹದೇ ಸಮಸ್ಯೆಯಿದೆ. ಕುಂಕುಮ, ಬಳೆ ಧರಿಸದ ಹೆಣ್ಣುಮಕ್ಕಳೆಲ್ಲ ಇವರಿಗೆ ಮುಸ್ಲಿಂರಾಗಿಯೋ ಅಥವಾ ವಿಧವೆಯವರಾಗಿಯೋ ಧ್ವನಿಸಿದರೆ ಅದು ಅವರ ಮನಸ್ಸಿನ ಆರೋಗ್ಯದ ಪ್ರಶ್ನೆ. ಅಥವಾ ಅವರು ನಂಬಿರುವ ತಾತ್ತ್ವಿಕತೆ ಹೆಣ್ಣನ್ನು ಹಾಗೆಯೇ ನೋಡಲು ಅಪೇಕ್ಷಿಸುತ್ತದೆ. ಮದುವೆಯಾದ ಹೆಣ್ಣು 'ತಾಳಿ' ಹಾಕಿಕೊಂಡಿರದಿದ್ದರೆ, ಅಥವಾ ಏಕವಚನದಲ್ಲಿ ಗಂಡನನ್ನು ಸಂಬೋಧಿಸಿದರೆ ಆಗ ಗಂಡಿನ ಪುರುಷತ್ವ ವರ್ಧಿಸದೇ ಹೋಗುವಂತಹ ಅಪಾಯಗಳ ಬಗ್ಗೆ ಭೈರಪ್ಪನವರಿಗೆ ಚಿಂತೆ! ಮಹಿಳೆಯನ್ನು 'ಭಾರತೀಯ ಮಹಿಳೆ'ಯನ್ನಾಗಿಯೇ ನಿಲ್ಲಿಸಬೇಕೆಂದು, ಈ ಭಾರತೀಯತೆಗೆ ಈ ಸಂಕೇತಗಳೇ ಪರಮಾಧಿಕಾರಗಳೆಂದು ನಿರ್ಧರಿಸುವ ಮೂಲಭೂತವಾದಿಗಳು ಹೆಣ್ಣಿನ ವ್ಯಕ್ತಿತ್ವವನ್ನು ಮೊಟಕಿಸುವ, ಕೌಟುಂಬಿಕ ಚೌಕಟ್ಟಿಗೇ ಆಕೆಯನ್ನು ಒಗ್ಗಿಸುವ ಪ್ರಯತ್ನವನ್ನು ಈ ಮೂಲಕ ಮಾಡುತ್ತಿರುತ್ತಾರೆಂಬುದು ಸ್ಪಷ್ಟವಾಗಿದೆ.

'ವೈಯಕ್ತಿಕ ಎಂಬುದು ರಾಜಕೀಯ'ವಾದದ್ದು (personal is political) ಎಂದು 70ರ ದಶಕದಲ್ಲಿ ಹೆಣ್ಣಿನ ಮೇಲೆ ನಡೆಯುವ ಹಿಂಸೆ, ಶೋಷಣೆಗಳಿಗೆ ಸಾಮಾಜಿಕ, ರಾಜಕೀಯ ಆಯಾಮ ತರಲು ಹೋರಾಡಿತು ಮಹಿಳಾ ಚಳವಳಿ. ಹೆಣ್ಣಿನ ಮೇಲೆ ಅವಿರತವಾಗಿ ನಡೆಯುವ ಹಿಂಸೆಗೆ ಒಂದು ರಾಜಕೀಯ ಆಯಾಮವನ್ನು ಒದಗಿಸುವಲ್ಲಿ, ಕಾನೂನುಗಳಲ್ಲಿ ಹಲವಾರು ಬದಲಾವಣೆ ತರುವಂತೆ ಪ್ರಭುತ್ವದ ಮೇಲೆ ಒತ್ತಡ ಹೇರುವಲ್ಲಿ ಚಳವಳಿಗಳು ಸಫಲವಾಗಿವೆ. 90ರ ದಶಕದಿಂದೀಚೆಗೆ 'ರಾಜಕೀಯವಾದದ್ದೂ ವೈಯಕ್ತಿಕವೇ' (political is personal) ಎಂಬ ತಾತ್ತ್ವಿಕ ಚಿಂತನೆಯನ್ನು ಒಳಗೊಳ್ಳಲೂ ಪ್ರಯತ್ನಿಸಲಾಗಿದೆ. ಕೋಮುಗಲಾಟೆಗಳು, ಜಾಗತೀಕರಣದ ಪ್ರಕ್ರಿಯೆಗಳು, ಸಾಮೂಹಿಕ ಅತ್ಯಾಚಾರಗಳು – ಇಂತಹ ಹಲವಾರು ಪ್ರಕರಣಗಳಲ್ಲಿ ರಾಜಕೀಯವೆಂದು ಮಾತ್ರ ಅನ್ನಿಸಿಕೊಳ್ಳುವ ವಿಚಾರಗಳು ನಮ್ಮ ಬದುಕಿಗೆ, ಬದುಕಿನ ಘನತೆಗೆ ಒಡ್ಡುತ್ತಿರುವ ಅಪಾಯಗಳನ್ನು ಸವಾಲುಗಳೆಂದೇ ಸ್ವೀಕರಿಸಿರುವ ಮಹಿಳಾ ಚಳವಳಿ ಇಂದು ರಾಜಕೀಯವಾಗಿರುವ ಪ್ರಶ್ನೆಗಳೂ ಕೂಡಾ ವೈಯಕ್ತಿಕ ಬದುಕಿನ ಅಪಾಯಕ್ಕೆ ಸಂಬಂಧಿಸಿದವುಗಳೇ ಎಂಬ ತಾತ್ವಿಕ ಚಿಂತನೆಯನ್ನು ಒಳಗೊಳ್ಳತೊಡಗಿವೆ. ಹೋರಾಟದ ದಾರಿಯಲ್ಲಿ ಖಾಸಗಿ, ರಾಜಕೀಯ, ಸಾಮಾಜಿಕ ಆಯಾಮಗಳನ್ನು ಗುರುತಿಸುತ್ತಾ ಅವುಗಳ ಅಂತರ್ಗತ ಸಂಬಂಧ, ಅವು ಮ್ಯಾನಿಫೆಸ್ಟೇಶನ್ ಆಗುವ ರೀತಿಯನ್ನು ಗುರುತಿಸುತ್ತದೆ. ಮಹಿಳಾ ಪ್ರಶ್ನೆಯನ್ನು ರಾಜಕೀಯ ಪ್ರಶ್ನೆಯಾಗಿ, ರಾಜಕೀಯ ಪ್ರಶ್ನೆಯನ್ನು ಮಹಿಳಾ ಪ್ರಶ್ನೆಯಾಗಿ ವಿವೇಚಿಸಿ ಇವುಗಳ ಅಂತರ್ ಸಂಬಂಧದಲ್ಲಿಯೇ ಸಂಕೀರ್ಣತೆಗಳನ್ನು ಗುರುತಿಸುತ್ತಾ ಹೋರಾಟದ ವಿಧಾನಗಳನ್ನು, ದಾರಿಗಳನ್ನು ರೂಪಿಸಿಕೊಳ್ಳತೊಡಗಿದೆ. ವರದಕ್ಷಿಣೆಗಾಗಿ ಇಂದು ಸಾರ್ವಜನಿಕ ನ್ಯಾಯಾಲಯಗಳಲ್ಲಿ ನ್ಯಾಯದ ಕಲ್ಪನೆಯನ್ನು ವಿಸ್ತರಿಸಲಾಗುತ್ತಿದೆ. ಜಾಗತೀಕರಣದ ಹಿನ್ನೆಲೆಯಲ್ಲಿ ರೈತ ಮಹಿಳೆಯರ ಪ್ರಶ್ನೆ, ದಲಿತ ಮಹಿಳೆಯರ ಪ್ರಶ್ನೆಗಳೂ ಕೂಡಾ ಭಿನ್ನವಾದ ನ್ಯಾಯದ ಪರಿಕಲ್ಪನೆಯನ್ನು

ಅಪೇಕ್ಷಿಸುತ್ತವೆ. ಕೋಮುವಾದದ ಹಿಂದಿರುವ ರಾಜಕೀಯ ಹುನ್ನಾರಗಳಲ್ಲಿ ಒಂದು ವರ್ಗದ ಮಹಿಳೆಯರ ಪಾಲ್ಗೊಳ್ಳುವಿಕೆಯೂ ಇದ್ದು-ಇನ್ನೊಂದು ವರ್ಗದ ಮಹಿಳೆಯರು ಅವರಿಂದಲೇ ಶೋಷಿತರಾಗುತ್ತಿರುವುದು ಕೂಡಾ ಇಂದು ಮಹಿಳಾ ಚಳವಳಿಯ ಮುಂದಿರುವ ಸವಾಲಾಗಿದೆ.

'Personal is Political', 'Political is Personal' ಎರಡೂ ತಾತ್ತ್ವಿಕ ಚಿಂತನೆಗಳು ಒಂದು ಸಾಮೂಹಿಕ ಅನುಭವದ ಹಿನ್ನೆಲೆಯ ಚಾರಿತ್ರಿಕ ಸಂದರ್ಭದಲ್ಲಿ ಒಡಮೂಡಿದ ತಾತ್ತ್ವಿಕ ಚಿಂತನೆಗಳು. ಮಹಿಳೆಯರ ಮೇಲಿನ ರಾಚನಿಕ ಹಿಂಸಾಚಾರ ಎದುರಿಸುವಲ್ಲಿ ಕಾನೂನುಗಳ ಸುಧಾರಣೆಗಳಿಗಾಗಿ ಮಹಿಳಾ ಚಳವಳಿ ಪ್ರಭುತ್ವದ ಮೇಲೆ ಹೇರಿದ ಒತ್ತಡದ ಫಲಶ್ರುತಿಯಾಗಿ ವರದಕ್ಷಿಣೆಯ ಕಾನೂನುಗಳಲ್ಲಿ ಹಲವಾರು ಬದಲಾವಣೆಗಳಾದವು. ಕೆಲಸ ಮಾಡುವ ಸ್ಥಳದಲ್ಲಿ ಲೈಂಗಿಕ ದೌರ್ಜನ್ಯ ವಿರೋಧಿ ಕಾನೂನು ಈ ದಿಸೆಯಲ್ಲಿ ಜಾರಿಗೆ ಬಂದ ಇನ್ನೊಂದು ಕಾನೂನು. ಹಾಗೆಯೇ ಇತ್ತೀಚೆಗೆ ಬಂದದ್ದು ಕೌಟುಂಬಿಕ ದೌರ್ಜನ್ಯ ವಿರೋಧಿ ಕಾಯಿದೆ. ಯಾವುದೇ ಕಾನೂನೂ ದುರುದ್ದೇಶಕ್ಕಾಗಿ ಬಳಕೆಯಾಗುವುದೂ ಉಂಟು. ಇಂದು ನ್ಯಾಯ ದೇವತೆ ದುಡ್ಡಿದ್ದವರಿಗೇ ಒಲಿಯುವ ಪರಿಪಾಠ ಸಾಮಾನ್ಯವಾಗಿಬಿಟ್ಟಿದೆ. ಹಾಗೆಂದು ಕಾನೂನುಗಳೇ ಬೇಡವೆಂದು ಇಲ್ಲಿಯವರೆಗೆ ಯಾರೂ ಹೇಳಿಲ್ಲ. ಕೌಟುಂಬಿಕ ದೌರ್ಜನ್ಯ ವಿರೋಧೀ ಕಾಯಿದೆಯನ್ನು ಹೆಣ್ಣುಮಕ್ಕಳು ದುರ್ಬಳಕೆ ಮಾಡುವುದೇ ಇಲ್ಲವೆಂದಲ್ಲ. ಆದರೆ ಜಾತಿ, ವರ್ಗ, ಜನಾಂಗದ ಹಿನ್ನೆಲೆಯಲ್ಲಿ ಮಹಿಳಾ ಪ್ರಶ್ನೆ, ಸಮಸ್ಯೆ, ನಿರ್ವಚಿಸುವ ಮಹಿಳಾ ಚಳವಳಿ-ಪುರುಷಾದಿಪತ್ಯದ ಹುನ್ನಾರಗಳನ್ನೊಳಗೊಂಡ ಮಹಿಳೆಯರನ್ನೂ ಪುರುಷಪ್ರಧಾನ ಮೌಲ್ಯಗಳ ಪ್ರತಿನಿಧಿಗಳೆಂದೇ ಭಾವಿಸುತ್ತದೆ. ಹಾಗಾಗಿ ಇಂತಹ ಪ್ರತಿನಿಧಿಗಳ ಬಗ್ಗೆ ಪುರುಷ ಪ್ರಧಾನ ಸಮಾಜದ ಬಗ್ಗೆಇರುವ ವಿಮರ್ಶೆ, ನಿರ್ಲಕ್ಷ್ಯ, ಉಪೇಕ್ಷೆ ಇಂಥವರ ಬಗ್ಗೆಯೂ ಇರುತ್ತದೆ. ಇಂತಹವುಗಳನ್ನು ಪ್ರತ್ಯೇಕಿಸಿ ನೋಡುವ ಸಂವೇದನಾಶೀಲತೆ ಸ್ತ್ರೀವಾದಿ ಚಳವಳಿಯಲ್ಲಿದೆ.

ರಾಜಕೀಯವಾಗಿರುವುದು ವೈಯಕ್ತಿಕ ಬದುಕಿನ ಘನತೆಗೆ ಧಕ್ಕೆ ತರುತ್ತದೆ ಎಂದು ವಿಶಾಲವಾದ ಹರವಿನಲ್ಲಿ, ಚೌಕಟ್ಟಿನಲ್ಲಿ ನಾವು ಅರ್ಥೈಸುತ್ತಿದ್ದರೆ, ಮಹಿಳಾ ಪರವಾಗಿರುವ ಕಾನೂನು ವ್ಯವಸ್ಥೆಯ ರಾಜಕೀಯ ಆಯಾಮಗಳನ್ನು ತಮ್ಮ ವೈಯಕ್ತಿಕ ಹಂತಕ್ಕೆ ಅನ್ವಯಿಸಿ ಬರೆಯುವ ಭೈರಪ್ಪನವರ ಗ್ರಹಿಕೆಗಳು ತೀರಾ ವೈಯಕ್ತಿಕ ಹಂತದವುಗಳು ಮಾತ್ರ, ಒಂದು ಸಮೂಹದ, ಒಂದು ಜನಾಂಗದ ಸಾಮೂಹಿಕ ಅನುಭವಗಳ ಚರಿತ್ರೆಯ ಅರಿವು ಅದಕ್ಕಿಲ್ಲ. ಒಂದು ಸಾಮೂಹಿಕ ಅನುಭವಕ್ಕೆ, ಪ್ರಜ್ಞೆಗೆ, ಬದುಕಿಗೆ ಪಕ್ಕಾಗುವಂತಹ ಸಂಗತಿಗಳು ಮಾತ್ರ ಚಾರಿತ್ರಿಕವಾಗಿ ಮಹತ್ವ ಪಡೆಯಬಲ್ಲ ಸಾಮರ್ಥ್ಯವನ್ನು ಹೊಂದಿರುತ್ತವೆ. ಬಹುಮುಖಿ ಸಂಸ್ಕೃತಿಯ ಅಸ್ತಿತ್ವದ ಬಗ್ಗೆ ಅಪಾರವಾದ ಒಲವು, ಕಾಳಜಿ ಇರುವ ಮಹಿಳಾ ಚಳವಳಿ ಚಾರಿತ್ರಿಕವಾಗಿರುವ ಹೆಣ್ಣಿನ ಅಸ್ತಿತ್ವದ ಪ್ರಶ್ನೆಗಳಿಗೆ ಸಂವೇದನಾಶೀಲವಾಗಿಯೇ ಪ್ರತಿಕ್ರಿಯಿಸುತ್ತಾ ಹೋರಾಟ ಮಾಡುತ್ತಿರುವುದರಿಂದ ಜಾತಿ, ವರ್ಗ, ಲಿಂಗದ ಪ್ರಶ್ನೆಗಳ ಸಂಕೀರ್ಣತೆಯನ್ನು ಅಲ್ಲಗಳೆಯದೇ, ಸರಳೀಕರಿಸದೆ – ಈ ಶತಮಾನದಲ್ಲೂ ಹೋರಾಟ ಮಾಡುತ್ತಿದೆ.

ಆದರೆ ಪಿತೃಪ್ರಧಾನ ಮೌಲ್ಯಗಳ ಆರಾಧಕರಾಗಿರುವ ಕೆಲವು ವರ್ಗದ ಮಹಿಳೆಯರ ವರ್ತನೆಗಳನ್ನೇ ಸಾರ್ವತ್ರಿಕವಾಗಿಸಿ ಹಾಗೂ ಎಲ್ಲಾ ಮಹಿಳೆಯರ ವರ್ತನೆ, ಅದರಲ್ಲೂ ವಿಶೇಷವಾಗಿ ಸ್ತ್ರೀವಾದಿಗಳದ್ದು ಎಂದು 'ಪ್ರತಿನಿಧೀಕರಣ' ಮಾಡುವ ಭೈರಪ್ಪನವರು ಬಹುಸಂಖ್ಯಾತ ಮಹಿಳೆಯರಿಗೆ ಜೀವಪರವಾಗಿರುವ ಕಾನೂನುಗಳು ನಿಷೇಧವಾಗಲಿ ಎಂಬಂತೆ ಚಿತ್ರಿಸಿರುವುದು ಅವರ ವ್ಯಕ್ತಿತ್ವಕ್ಕೇ ಮಾರಕವಾಗುವಂತಹ ವಿಚಾರವಾಗಿದೆ. 'ಕವಲು'ನಂತಹ 'ರಾಜಕೀಯ ಅಜೆಂಡಾ'ಗಳಿಂದ ಪ್ರೇರಿತವಾದ ಕಾದಂಬರಿ ಭೈರಪ್ಪನವರ ಕ್ರಿಯಾಶೀಲತೆ ಅಧೋಗತಿಗೆ ಇಳಿದಿರುವುದಕ್ಕೆ ಸಾಕ್ಷಿಯಾಗಿದೆ. ❑

## ಹೆಚ್.ಐ.ವಿ. ಹಾಗೂ ದಕ್ಷಿಣ ಆಫ್ರಿಕಾದ ಮಕ್ಕಳು

ದಕ್ಷಿಣ ಆಫ್ರಿಕಾದಲ್ಲಿ ಹೆಚ್.ಐ.ವಿ. ವ್ಯಾಪಕವಾಗಿ ಹರಡುತ್ತಿದೆ. ಈ ಮಾರಕರೋಗದಿಂದ ದಕ್ಷಿಣ ಆಫ್ರಿಕಾದ ಮಕ್ಕಳ ಬದುಕು ನರಕಮಯವಾಗಿದೆ. ಈ ಮಕ್ಕಳ ಸ್ಥಿತಿ-ಗತಿಯನ್ನು ಕುರಿತು ಅಧ್ಯಯನ ನಡೆಸಲಾಗುತ್ತಿದೆ. ಈ ಅಧ್ಯಯನದ ಉದ್ದೇಶ ಆಡಳಿತಾತ್ಮಕ ನಿಯಮಗಳನ್ನು ರೂಪಿಸುವಂತೆ ಸರ್ಕಾರದ ಮೇಲೆ ಒತ್ತಡವನ್ನು ಹೇರುವುದು. ಶೇ. 40ರಷ್ಟು ಮಕ್ಕಳು ಮನೆಯಿಂದ ಕಾಣೆಯಾಗುತ್ತಿದ್ದಾರೆ. ಹಾಗೂ ಶಾಲೆಯನ್ನು ಅರ್ಧದಲ್ಲೆ ಬಿಟ್ಟು ಬರುತ್ತಾರೆ. ಲೂಸಿ ಕ್ಲೋವರ್ ಎಂಬುವವರು ಈ ಅಧ್ಯಯನವನ್ನು ನಡೆಸುತ್ತಿದ್ದಾರೆ. ಕೇವಲ ಶೇ. 2ರಷ್ಟು ಮಕ್ಕಳು ಮಾತ್ರ ಆರೋಗ್ಯವಂತ ಕುಟುಂಬಗಳಲ್ಲಿ ವಾಸವಾಗಿದ್ದಾರೆ. ಈಕೆಯ ಅಧ್ಯಯನದ ಪ್ರಕಾರ ಪ್ರತಿಯೊಂದು ಕುಟುಂಬದಲ್ಲಿ ಮಕ್ಕಳು ಅನಾರೋಗ್ಯ ಪೀಡಿತ ತಂದೆ-ತಾಯಿಯರ ಆರೈಕೆಯನ್ನು ಮಾಡಬೇಕಾಗುತ್ತದೆ. ಎಂಟು ವರ್ಷದ ಮಕ್ಕಳು ಸಹ ಅನಾರೋಗ್ಯ ಪೀಡಿತರನ್ನು ಸ್ನಾನ ಮಾಡಿಸುವುದು, ಶೌಚಾಲಯಕ್ಕೆ ಕರೆದುಕೊಂಡು ಹೋಗುವುದು, ಗಾಯಗಳನ್ನು ಶುಚಿಗೊಳಿಸುವುದು ಮುಂತಾದ ಕೆಲಸಗಳನ್ನು ಮಾಡುತ್ತಾರೆ. ವಿಶೇಷವಾಗಿ ಹೆಣ್ಣುಮಕ್ಕಳ ಮೇಲೆ ಈ ಜವಾಬ್ದಾರಿ ಬೀಳುತ್ತದೆ. ಇಂತಹ ಮಕ್ಕಳು ಶಾಲೆಯಲ್ಲಿ ಅವಮಾನ, ನಿಂದೆಯ ಮಾತುಗಳನ್ನು ಎದುರಿಸುತ್ತಾರೆ. 11 ವರ್ಷದ ಬಾಲೆಯೊಬ್ಬಳು ತನ್ನ ಸಹಪಾಠಿಗಳು ತನ್ನ ಮುಖ ದೊಡ್ಡ ಕೋತಿಯ ಮುಖವೆಂದು ತಮಾಷೆ ಮಾಡುವುದನ್ನು ದುಃಖದಿಂದ ಹೇಳುತ್ತಾಳೆ. "ಮನೆಯಲ್ಲಿ ಚಾದರಗಳನ್ನು ಶುಚಿಗೊಳಿಸುವುದು, ಸಣ್ಣಮಕ್ಕಳನ್ನು ನೋಡಿಕೊಳ್ಳುವುದು, ಔಷಧೋಪಚಾರಗಳನ್ನು ಮಾಡುವುದು, ಆಸ್ಪತ್ರೆಗೆ ಹೋದಾಗ ಶಾಲೆ ತಪ್ಪಿಸುವುದು ಹಾಗೂ ಔಷಧಿಯನ್ನು ಪಡೆಯಲು ಕ್ಯೂನಲ್ಲಿ ನಿಲ್ಲಬೇಕಾದರೆ ಶಾಲೆ ತಪ್ಪಿಸುವುದು ಅನಿವಾರ್ಯವಾಗುತ್ತದೆ" ಎನ್ನುತ್ತಾಳೆ. 13 ವರ್ಷದ ಬಾಲಕನೊಬ್ಬ "ಆಹಾರ ತೆಗೆದುಕೊಳ್ಳಲು ನಮ್ಮ ಬಳಿ ಹಣವಿಲ್ಲ, ಆದರೆ ನಮ್ಮ ತಾಯಿ ಕೆಲಸಕ್ಕೆ ಹೋಗುವುದೂ ಸಾಧ್ಯವಾಗುತ್ತಿಲ್ಲ" ಎನ್ನುತ್ತಾನೆ. 12 ವರ್ಷದ ಬಾಲಕಿಯೊಬ್ಬಳು "ಗಾಲಿಕುರ್ಚಿಯಲ್ಲಿ ತಾಯಿಯನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗಬೇಕು" ಹಾಗೂ ಆಕೆಯ ತಾಯಿ ಹಾಸಿಗೆಯಿಂದ ಎದ್ದು ಒಂದು ಗ್ಲಾಸ್ ನೀರನ್ನು ತೆಗೆದುಕೊಳ್ಳಲೂ ಸಾಧ್ಯವಾಗದ ಕಾರಣ "ತಾನು ಶಾಲೆಗೆ ಹೋಗುವುದನ್ನು ನಿಲ್ಲಿಸಿದ್ದೇನೆ" ಎನ್ನುತ್ತಾಳೆ.

ಕ್ಲೋವರ್ ಪ್ರಕಾರ 2008ರಲ್ಲಿ 1.4 ಮಿಲಿಯನ್ ಮಕ್ಕಳು ಎಚ್.ಐ.ವಿ.ಯಿಂದಾಗಿ ತಂದೆ-ತಾಯಂದಿರನ್ನು ಕಳೆದುಕೊಂಡಿದ್ದಾರೆ. 2015ರಲ್ಲಿ ಈ ಅಂಕಿ-ಅಂಶ ಹೆಚ್ಚಾಗಲಿದೆ. ಇಂತಹ ಎಚ್.ಐ.ವಿ. ಪೀಡಿತ ಕೌಟುಂಬಿಕ ವಾತಾವರಣದಲ್ಲಿ ಬದುಕುತ್ತಿರುವ ಮಕ್ಕಳಿಗೆ ಉತ್ತಮವಾದ ಆರೋಗ್ಯ ಸೌಲಭ್ಯ, ಉತ್ತಮವಾತಾವರಣವನ್ನು ಕಲ್ಪಿಸಿಕೊಡಬೇಕೆನ್ನುವುದು ಅಧ್ಯಯನಕಾರ್ತಿಯ ಉದ್ದೇಶ. ಸರ್ಕಾರ ಈ ನಿಟ್ಟಿನಲ್ಲಿ ಗಣನೀಯ ನಿರ್ಣಯಗಳನ್ನು ತೆಗೆದುಕೊಳ್ಳಬೇಕೆನ್ನುವುದು ಈ ಅಧ್ಯಯನದ ಆಶಯವಾಗಿದೆ.

* * *

**ಈ ಹಿನ್ನೆಲೆಯಲ್ಲಿ ಭಾರತವೂ ಈ ಅಪಾಯದಿಂದ ತಪ್ಪಿಸಿಕೊಳ್ಳಲಾಗುತ್ತಿಲ್ಲ ಎಂಬುದು ಪ್ರತಿನಿತ್ಯ ಇಂಥ ಹತ್ತಾರು ಸುದ್ದಿಗಳನ್ನು ಗಮನಿಸಿದಾಗ ತಿಳಿಯುತ್ತದೆ. ಮುನ್ನೆಚ್ಚರಿಕೆ ಈ ಕ್ಷಣದ ತುರ್ತು!**

*(ಸಂಗ್ರಹ : ಎಚ್.ಎಸ್. ರಾಜೇಶ್ವರಿ)* ❑

OXFORD
GUNABHIRAM BARUA
Ramnabami-Natak
The Story of Ram and Nabami
Translated and with an Introduction by Tilottoma Misra

'ರಾಮನಬಮಿ ನಾಟಕ್' ಹತ್ತೊಂಬತ್ತನೆಯ ಶತಮಾನದ ಒಂದು ಅಸ್ಸಾಮೀ ನಾಟಕ. ಅದರ ಕರ್ತೃ ಗುಣಾಭಿರಾಮ್ ಬರುಆ (1837-1894). ಸುಮಾರು ನೂರೈವತ್ತು ವರ್ಷಗಳಷ್ಟು ಹಿಂದೆ ರಚಿತವಾಗಿರುವ ಈ ನಾಟಕವನ್ನು ಇತ್ತೀಚೆಗೆ ಡಾ. ತಿಲೋತ್ತಮಾ ಮಿಶ್ರ ಅವರು ಇಂಗ್ಲಿಷ್‌ಗೆ ಅನುವಾದಿಸಿದ್ದು ಈ ಗ್ರಂಥವನ್ನು 2007ರಲ್ಲಿ Oxford University Press, Delhi ಯವರು ಪ್ರಕಟಿಸಿದ್ದಾರೆ. Front Line ಪತ್ರಿಕೆಗೆ ಈ ಗ್ರಂಥದ ವಿಮರ್ಶೆ ಮಾಡಿರುವ ಶ್ರೀ ಎಂ.ಎಸ್. ಪ್ರಭಾಕರ್(ಕಾಮರೂಪಿ) ಅವರು ಕನ್ನಡದ ಹೆಸರಾಂತ ನವ್ಯ ಲೇಖಕರು. ಡಾ. ತಿಲೋತ್ತಮಾಮಿಶ್ರ ಅಸ್ಸಾಂನ ಡಿಬ್ರುಘರ್ ವಿಶ್ವವಿದ್ಯಾಲಯದ ಇಂಗ್ಲಿಷ್ ವಿಭಾಗದ ಪ್ರಾಧ್ಯಾಪಕರು, ಹೆಸರಾಂತ ಸ್ತ್ರೀವಾದಿ ವಿಮರ್ಶಕರು. Front Line ಪತ್ರಿಕೆಯ April 20, 2007ರ ಸಂಚಿಕೆಯಲ್ಲಿ 'As Good as New' ಎಂಬ ಶೀರ್ಷಿಕೆಯಿಂದ ಪ್ರಕಟಗೊಂಡಿರುವ ಎಂ.ಎಸ್. ಪ್ರಭಾಕರ್ ಅವರ ಪುಸ್ತಕ ವಿಮರ್ಶಾ ಲೇಖನವು ವಸಾಹತೋತ್ತರ ಚಿಂತನೆ ಹಾಗೂ ಅಧ್ಯಯನಗಳ ದೃಷ್ಟಿಯಿಂದ ಹಲವು ಮಹತ್ವದ ಪ್ರಶ್ನೆಗಳನ್ನು ಎತ್ತುತ್ತದೆ. 'ನಮ್ಮ ಮಾನಸ'ದ ಓದುಗರಿಗಾಗಿ ಆ ಲೇಖನವನ್ನು ಅನುವಾದಿಸಿ ಕೊಡಲಾಗಿದೆ.

# 'ರಾಮನಬಮಿ ನಾಟಕ್'

## ವಸಾಹತು ಆಳ್ವಿಕೆ ಮತ್ತು ದೇಶೀಯ ಚಿಕ್ಕರಾಜ್ಯಗಳ ಸಾಂಸ್ಕೃತಿಕ ಮುಖಾಮುಖಿ

*ಇಂಗ್ಲಿಷ್ : ಎಂ.ಎಸ್. ಪ್ರಭಾಕರ್*
*ಸಂಗ್ರಹ ಕನ್ನಡಾನುವಾದ: ಬಿ.ಎನ್. ಸುಮಿತ್ರಾಬಾಯಿ*

ಈ ದೇಶದ ಚಿಕ್ಕರಾಜ್ಯಗಳ ಜನರು ಆಕಸ್ಮಿಕವಾಗಿ ಅಥವಾ ಅನಿವಾರ್ಯ ಪರಿಸ್ಥಿತಿಯಿಂದಾಗಿ ವಸಾಹತು ಆಳ್ವಿಕೆಯ ಸಂಪರ್ಕಕ್ಕೆ ಬಂದರು. ಆ ವಸಾಹತುಶಾಹಿ ಅವರನ್ನೇ ಆಕ್ರಮಿಸಿ, ಗೆದ್ದು, ಅವರನ್ನು ದಾಸ್ಯಕ್ಕೆ ತಳ್ಳಿ ಹೊಸ ಆಡಳಿತ, ಹೊಸ ಜೀವನ ಕ್ರಮವನ್ನು ಸ್ಥಾಪಿಸುತ್ತಿದ್ದಾಗ, ಬ್ರಿಟಿಷರ ಪ್ರೆಸಿಡೆನ್ಸಿ ಪ್ರಾಂತಗಳ ಹೊರಗೆ ಅಂಚಿನಲ್ಲುಳಿದಿದ್ದ ಚಿಕ್ಕರಾಜ್ಯಗಳ ಜನತೆ ಈ ಹೊಸವ್ಯವಸ್ಥೆಯೊಂದಿಗೆ ಹೇಗೆ ವ್ಯವಹರಿಸಿದರು? ಈ ಹೊಸ ಜೀವನ ಕ್ರಮವನ್ನು ಅವರು ಅರ್ಥೈಸಿಕೊಳ್ಳತೊಡಗಿದ, ಪ್ರತಿರೋಧಿಸಿದ ರೀತಿಗಳೇನು? ಕಾಲಕ್ರಮೇಣ ಇಚ್ಛೆಯಿದ್ದೋ ಅಥವಾ ಇಲ್ಲದೆಯೋ, ಉದಾಸೀನತೆಯಿಂದ ಅಥವಾ ಬಿಗಿದ ಮುಖದೊಂದಿಗೆ ಆ ಹೊಸದಕ್ಕೆ ಒಗ್ಗಿಕೊಳ್ಳ ತೊಡಗಿದ ರೀತಿಗಳೇನು? ಹೊಸ ಆಡಳಿತಕ್ರಮವೂ ಆರ್ಥಿಕ ಪ್ರಗತಿಸಾಧಿಸಿದ ವಸಾಹತುಶಾಹಿ ಅಧಿಕಾರವೂ ತಮ್ಮ ಬದುಕಿನ ಪ್ರತಿಯೊಂದು ಅಂಶದ ಮೇಲೂ ಆಘಾತವುಂಟು ಮಾಡುತ್ತಿದ್ದಂಥ ಪರಿಸ್ಥಿತಿಯೊಂದಿಗೆ ಅವರು ಹೇಗೆ ನಿಭಾಯಿಸಿದರು? ತಮ್ಮ ಭೂತಕಾಲ ಮತ್ತು ಭವಿಷ್ಯಗಳ ಮೇಲೆ ಘಟ್ಟಿಸುತ್ತಿದ್ದ ಹೊಸ ಪರಿಸ್ಥಿತಿಗಳ ಜೊತೆ ಅವರು ಹೇಗೆ ವ್ಯವಹರಿಸಿದರು? ಎಂಬ ರೀತಿಯ ಪ್ರಶ್ನೆಗಳು ಈಗಾಗಲೇ ನಾವು ಸೋಲಿಸಿ ಕಳಿಸಿರುವ ವಸಾಹತುದಾರರ ವಿಷಯದಲ್ಲಿ ಹುಟ್ಟುವುದು ಅನುಚಿತ ವೇನೂ ಅಲ್ಲ. ಅದರಲ್ಲೂ ದೀರ್ಘಕಾಲದ ಆಳ್ವಿಕೆಯನಂತರವೂ ನಮ್ಮ-ಅವರ ಸಂಬಂಧಗಳು ಇಂದಿಗೂ ರಾಜಿ ಒಪ್ಪಂದದ ಪ್ರಕ್ರಿಯೆಯಲ್ಲೇ ಉಳಿದಿರುವಾಗ ಇಂತಹ ಪ್ರಶ್ನೆಗಳಿಗೆ ಮಹತ್ವವಿದ್ದೇ ಇರುತ್ತದೆ.

ಆಧುನಿಕತೆ ಅಥವಾ ಪಾಶ್ಚಾತ್ಯೀಕರಣವನ್ನು ಆ ಪದದ ಅತ್ಯಂತ ವಿಶಾಲಾರ್ಥದಲ್ಲಿ, ಪ್ರತಿನಿಧಿಸುವಂತಹ ಮೌಲ್ಯಗಳನ್ನು ಸರಿಗಟ್ಟಬಲ್ಲುದಾಗಿದ್ದ ತನ್ನ ಹಿಂದಿನ ಪರಂಪರೆ ಯಿಂದ ಪಡೆದಿದ್ದಂಥ ಮೌಲ್ಯಗಳನ್ನು ಅನರ್ಹವೆಂದು ಜನರು ತಿರಸ್ಕರಿಸಿಬಿಡುವಂತೆ ಆಗಿದ್ದಕ್ಕೆ ಕಾರಣ, ಈ ಹೊಸಮೌಲ್ಯಗಳು ಕಿತ್ತೊಗೆದಂಥ ಹಿಂದಿನ ಊಳಿಗಮಾನ್ಯ ವ್ಯವಸ್ಥೆಯಿಂದ ಸಿಗುತ್ತಿದ್ದ ಅವಕಾಶಗಳಿಗಿಂತ ಹೆಚ್ಚಿನ ಪ್ರಾಪಂಚಿಕ ಅವಕಾಶಗಳು ಈ ಹೊಸವ್ಯವಸ್ಥೆ ದೊರಕಿಸಿಕೊಡಬಲ್ಲುದು ಎಂಬುದೇ ಆಗಿತ್ತು. ಇದನ್ನು ಈಗ ಹೆಚ್ಚು ಕಡಿಮೆ ಎಲ್ಲರೂ ಒಪ್ಪಿದ್ದಾರೆ. ಉದಾಹರಣೆಗೆ ಇಂಗ್ಲಿಷ್ ಶಿಕ್ಷಣಕ್ಕೆ ತೆರೆದುಕೊಳ್ಳುವ ಅವಕಾಶ ಎಂದೂ ಇರದಿದ್ದ ಜನರು, ಫಿರಂಗಿಗಳ ಬಗ್ಗೆ ಕಡುದ್ವೇಷವಿದ್ದವರೂ, ತಲೆತಲಾಂತರವಾಗಿ ಸಂಸ್ಕೃತ ಪಾಠಶಾಲೆ ಇಲ್ಲವೆ ಇಸ್ಲಾಮಿ ಮದ್ರಸ್ಸಾಗಳಂಥ ಸಾಂಪ್ರದಾಯಿಕ ಶಿಕ್ಷಣ ಸಂಸ್ಥೆಗಳಲ್ಲಿ ಕಲಿತು ಬಂದವರಿಗೂ ಕೂಡ ಉದಾರವಾದಿ ಕಲಾಜ್ಞಾನ ಶಿಸ್ತುಗಳು ಮತ್ತು ವಿಜ್ಞಾನಗಳಂಥ ಸೆಕ್ಯುಲರ್ ಜ್ಞಾನಕ್ಷೇತ್ರಗಳಲ್ಲಿ ಇಂಗ್ಲಿಷ್ ಶಿಕ್ಷಣದಿಂದ ದೊರಕುತ್ತಿದ್ದ ದಿಟ್ಟವಾದ ನವವಿಧವಾದ ಅವಕಾಶಗಳ ಅರಿವು ತುಂಬ ಬೇಗ ಉಂಟಾಯಿತು. ಈ ಮೆಕಾಲೆಯ ಸಂತತಿಯತ್ತ ಹಿಂದಿರುಗಿ ನೋಡಲು ಈಗ ಸಾಧ್ಯವಾಗಿದೆ.

ಸಾಮ್ರಾಜ್ಯಶಾಹಿಯ ನಾಗರಿಕ ಹಾಗೂ ಮಿಲಿಟರಿ ಆಡಳಿತ ವ್ಯವಸ್ಥೆಗೆ ದಾರಿ ಅನುವು ಮಾಡಿಕೊಟ್ಟ ಮೊಟ್ಟ ಮೊದಲ ದೇಶೀಯ ಸಹಾಯಕ ದಳಗಳು ಇವರು ಎಂದು ಈಗ ನೋಡುವುದರಲ್ಲಿ ಬಹುಶಃ ನ್ಯಾಯವೂ ಇದೆ. ಆದರೆ ಹಾಗೆ ಬ್ರಿಟಿಷರ ಸಿವಿಲ್ ಹಾಗೂ ಮಿಲಿಟರಿ ಸೇನೆಗಳಿಗೆ ನೇಮಕಗೊಳ್ಳುವುದನ್ನು ಆ ಚಾರಿತ್ರಿಕ ಸಂದರ್ಭದಲ್ಲಿ ಬಂಧನದಿಂದ ಬಿಡುಗಡೆ ಪಡೆಯುವ ವಿಧಾನವೆಂದೇ ಎಣಿಸ ಲಾಗುತ್ತಿತ್ತು. ಪ್ರೆಸಿಡೆನ್ಸಿ ಪ್ರಾಂತಗಳ ಆಚೆಗೆ ಅಂಚುಗಳಲ್ಲಿದ್ದ ದೇಶೀಯ ರಾಜ್ಯಗಳಿಗೆ

ದಾಳಿಯಿಟ್ಟು, ಅಲ್ಲಿದ್ದ ಹಳೆಯ ಊಳಿಗಮಾನ್ಯ ವ್ಯವಸ್ಥೆಯನ್ನು ಉರುಳಿಸಿ, ಅವರನ್ನು ದಾಸ್ಯಕ್ಕೆ ತಳ್ಳುವ ಹೊತ್ತಿನಲ್ಲಿಯೇ ಜ್ಞಾನ ಪ್ರಬೋಧನೆಯ ಮೂಲಕ ಹೊಸ ಅವಕಾಶಗಳನ್ನೂ ವಸಾಹತು ಆಳ್ವಿಕೆಯು ಸೃಷ್ಟಿಸಿತ್ತು.

ಇನ್ನೊಂದು ಸಮಸ್ಯೆ ಎಂದರೆ, ಬ್ರಿಟನ್ ಸಾಮ್ರಾಜ್ಯಕ್ಕೂ ಅದು ಆಕ್ರಮಿಸಿಕೊಳ್ಳುತ್ತಾ ಮುನ್ನಡೆದ ಸ್ಥಳಗಳಿಗೂ ಇದ್ದ ವ್ಯಾವಹಾರಿಕ ಸಂಬಂಧ (ಒಂದೇ ತೆರನಾಗಿರದೆ) ವೈವಿಧ್ಯವುಳ್ಳದ್ದಾಗಿತ್ತು. ತಾವು ಗೆದ್ದುಕೊಂಡ ಸಂಸ್ಥಾನಗಳಲ್ಲಿ ಆಳುವ ಅಧಿಕಾರವನ್ನು ಕೆಲವು ಪರಿಮಿತಿಗಳೊಂದಿಗೆ ಸ್ಥಳೀಯರಿಗೇ ಬಿಟ್ಟುಕೊಡುವ ನೀತಿಯನ್ನು ಕೆಲವುಮಟ್ಟಿಗೆ ಅನುಸರಿಸಲಾಗುತ್ತಿತ್ತು. ಉದಾಹರಣೆಗೆ ಬರ್ಮೀಯರು (ಮ್ಯೆಯಾನ್ಮರಿಗಳು) ಅಸ್ಸಾಂನ ಮೇಲೆ ದುರಾಕ್ರಮಣ ಮಾಡಿದ್ದನ್ನು ತಪ್ಪಿಸಿ ಮುಂದೆ 1826ರ ಫೆಬ್ರವರಿಯಲ್ಲಿ ಯಂಡಬೋ ಒಪ್ಪಂದದ ಮೂಲಕ ಅಸ್ಸಾಮಿನ ಅರಸೊತ್ತಿಗೆಯನ್ನು ಕಿತ್ತುರುಳಿಸಿ ಅಹೋಂ ರಾಜರ ಅಧಿಕಾರವನ್ನು ಬ್ರಿಟಿಷರು ಪೂರ್ತಿ ಕಸಿದುಕೊಂಡರು. ಆದರೆ ಮಣಿಪುರ, ಖಚರ್, ಜೈಂತಿಯಾ ರಾಜ್ಯಗಳನ್ನೂ ಗೆದ್ದುಕೊಂಡಿದ್ದರಾದರೂ ಆ ರಾಜ್ಯಗಳಲ್ಲಿ ತಮ್ಮ ಒಬ್ಬ ರೆಸಿಡೆಂಟನ್ನು ಬ್ರಿಟಿಷ್ ಹಿತರಕ್ಷಣೆಗಾಗಿ ನೇಮಿಸಿ, ಹಿಂದಿನ ರಾಜರ ಆಳ್ವಿಕೆಯನ್ನು ಮುಂದುವರೆಸಲು ಬಿಟ್ಟಿತ್ತು. 1977ರ ಮೈಸೂರು ಯುದ್ಧದಲ್ಲಿ ಟಿಪ್ಪೂ ಸುಲ್ತಾನನನ್ನು ಸೋಲಿಸಿದ ಬಳಿಕ ಮೈಸೂರು ಸಂಸ್ಥಾನವನ್ನು ಆಳಲು ಹಿಂದಿದ್ದ ಅರಸು ಮನೆತನದವರಿಗೇ ಬ್ರಿಟಿಷರು ಆಸ್ಪದ ನೀಡಿದ್ದರು.

ಸಾಮ್ರಾಜ್ಯದ ಕಟ್ಟೋಣ ಎಂಬುದು ಮೂಲಭೂತವಾಗಿ ಲಾಭ ಗಳಿಸುವ ಯೋಜನೆ ಆಗಿತ್ತು. ಆಧುನಿಕತೆಯ ಮೌಲ್ಯಗಳ ಪ್ರಚಾರ ಮತ್ತು ಹಳೆಯ ಜೀವನ ವ್ಯವಸ್ಥೆಯನ್ನು ನಾಶಪಡಿಸುವುದು ಎಂಬುದು ಕೇವಲ ಆ ಲಾಭಗಳಿಕೆಯ ಸಾಂದರ್ಭಿಕ ವ್ಯವಹಾರಗಳು ಮಾತ್ರವೇ ಆಗಿದ್ದವು. ಬ್ರಿಟಿಷರ ಲಾಭಗಾರಿಕೆ ಉದ್ದೇಶದೊಂದಿಗೇ ಇವು ಯಾವಾಗಲೂ ತಳುಕು ಹಾಕಿಕೊಂಡಿರುತ್ತಿದ್ದವು. ಎಲ್ಲಿ ಯಾವುದು ಹೆಚ್ಚು ಲಾಭಕರವೋ, ಲಾಭವನ್ನು ನಿರಂತರವಾಗಿ ಗುಡ್ಡೆ ಹಾಕಿಕೊಳ್ಳುವುದು ಸಾಧ್ಯವಿತ್ತೋ ಅದಕ್ಕೆ ಪೂರಕವಾಗುವ ಕ್ರಮವನ್ನು ವಸಾಹತುಶಾಹಿಯು ಕೈಗೊಳ್ಳುತ್ತಿತ್ತು. ಆ ಕಾಲಕ್ಕೆ ಮೈಸೂರು ಸಂಸ್ಥಾನವು ಲಾಭೋತ್ಪಾದಕ ಕೇಂದ್ರವೇನೂ ಆಗಿರಲಿಲ್ಲ. ಆದರೆ 'ಚಹಾ'ದ ಸಂಶೋಧನೆ ನಡೆದಿದ್ದರಿಂದ ಅಸ್ಸಾಂ ಅತ್ಯಂತ ಲಾಭದ ಭರವಸೆ ಹುಟ್ಟಿಸಿದ್ದ ರಾಜ್ಯವಾಗಿತ್ತು. ಹೀಗಾಗಿ ಹಿಂದಿನಿಂದ ಇದ್ದ ಅರಸೊತ್ತಿಗೆಯನ್ನು ಉರುಳಿಸಿ, ಆ ಊಳಿಗಮಾನ್ಯ ವ್ಯವಸ್ಥೆಯ ಮರುಸ್ಥಾಪನೆಯನ್ನು ವಿರೋಧಿಸುವ ನೀತಿಯನ್ನು ಅನುಸರಿಸಿದ ಪ್ರಯೋಜನದ ಉದ್ದೇಶಕ್ಕೂ ಆಧುನೀಕರಣಕ್ಕೂ ಅಲ್ಲಿ ಸ್ಪರ್ಧಾತ್ಮಕ ಸೆಳೆದಾಟಗಳು ಹೆಚ್ಚು ತೀವ್ರವಾಗಿ ಕಾಣಿಸಿಕೊಂಡವು.

'ರಾಮ ನಬಮಿ ನಾಟಕ್' ಎಂಬ ಅಸ್ಸಾಮಿ ನಾಟಕದ ರಚನಾಕಾರನಾದ ಗುಣಾಭಿರಾಮ್‌ಬರುಆನ ಜೀವನ ಹಾಗೂ ವೃತ್ತಿಜೀವನದ ವಿವರಗಳು ಆ ನಾಟಕದಲ್ಲಿ (ಪ್ರಸ್ತಾವನೆಯಲ್ಲಿ) ಪ್ರತಿಪಾದಿತವಾಗಿವೆ. ಆ ವಿವರಗಳಲ್ಲಿ ಅಸ್ಸಾಂನಲ್ಲಿ ವಸಾಹತುಶಾಹಿಯ ಜೊತೆ ನಡೆದ ಮುಖಾಮುಖಿಯಲ್ಲಿದ್ದ ಅನೇಕ ಒಳವಿರೋಧದ ಅಂಶಗಳೂ ಚಿತ್ರಿತವಾಗಿವೆ. ಗ್ರಂಥದ ಸಂಪಾದಕರು ವಿವರಿಸುವ ಪ್ರಕಾರ ಗುಣಾಭಿರಾಮ್ 'ಪುನರಾವಿಷ್ಕೃತ ಬ್ರಾಹ್ಮಣ ಕುಟುಂಬ'ದಿಂದ ಬಂದವನು, ಅಸಾಧಾರಣ ಪಿತ್ರಾರ್ಜಿತ ಸಂಪತ್ತು ಹೊಂದಿದ್ದವನು. ಲಕ್ಷ್ಮೀನಾರಾಯಣ ಬ್ರಹ್ಮಚಾರಿ ಎಂಬಾತ ತನ್ನ ಹುಟ್ಟು ಸ್ಥಳವಾದ 'ದ್ರಾವಿಡ ದೇಶ'ವನ್ನು ತೊರೆದು, ತನ್ನ ಹಿಂದಿನ ಅನೇಕರಂತೆ, ನಿಧಿಯನ್ನು ಅರಸುತ್ತಾ ಅಸ್ಸಾಮಿಗೆ ಬಂದನು. ಅವನು ಅಸ್ಸಾಮನ್ನು ತಲುಪಿದ ಕಾಲವು ಅಹೋಂ ರಾಜ್ಯದ ಅವನತಿಗೆ ಕಾರಣಕರ್ತನೆಂದು ಕುಖ್ಯಾತಿ ಹೊಂದಿದ ಗೌರಿನಾಥ ಸಿಂಘ್ ಎಂಬ ರಾಜನ ಅನಾಯಕ ಆಳ್ವಿಕೆಯು ನಡೆದಿದ್ದ ಕಾಲವಾಗಿತ್ತು (Maheswar Neog). ಈ ರಾಜನೇ 'ರಾಜ್ಯವನ್ನು ಹಾಳುಗೆಡವಿದವನು' (S.K. Bhuyan). ಲಕ್ಷ್ಮೀನಾರಾಯಣನಿಗೆ ಈ ರಾಜ್ಯದ ಪಶ್ಚಿಮಗಡಿಯಲ್ಲಿರುವ ಹಾದಿರಾಚೌಕ್ ಎಂಬ ಸುಂಕದ ಕಟ್ಟೆಗೆ 'ದುಆರಿಯಾ ಬರುಆ' (ಸುಂಕದ ಅಧಿಕಾರಿ) ಆಗುವ ಉದ್ಯೋಗ ಲಭಿಸಿತು. ಅಸ್ಸಾಂ ಮತ್ತು ಬಂಗಾಳ ರಾಜ್ಯಗಳ ನಡುವಿನ ಎಲ್ಲ ವಾಣಿಜ್ಯ ವ್ಯಾಪಾರಗಳೂ ಹಾದುಹೋಗುತ್ತಿದ್ದ ಕೇಂದ್ರ ಇದು. ಅಹೋಂ ರಾಜ್ಯದ ಸುಂಕದ ಕಟ್ಟೆಗಳಲ್ಲೇ ಅತ್ಯಂತ ಹೇರಳವಾದ ಆದಾಯಗಳಿಕೆಯ ನೆಲೆಯೂ ಆಗಿತ್ತು.

ದ್ರಾವಿಡ ದೇಶದಿಂದ ಬಂದ ಲಕ್ಷ್ಮೀನಾರಾಯಣನೆಂಬ ಆ ವ್ಯಕ್ತಿ ಇಲ್ಲಿ ಎಷ್ಟು ಶ್ರೀಮಂತನಾದನೆಂದರೆ ತನ್ನೂರಿನಲ್ಲಿದ್ದ ತನ್ನದೇ ಕುಟುಂಬವನ್ನೇ ತ್ಯಜಿಸಿ ಬಂದವನು, ಇಲ್ಲಿ 'ಅತ್ಯಂತ ಶ್ರೀಮಂತವೂ ಸುಶಿಕ್ಷಿತವೂ ಆದ ಅಸ್ಸಾಮಿ ಕುಟುಂಬದ' ಯಜಮಾನನೆಂದು ಪ್ರಖ್ಯಾತನಾದನು. ಆ ಕುಟುಂಬದಲ್ಲಿ ಆರು ಗಂಡುಮಕ್ಕಳು, ಒಬ್ಬಳು ಮಗಳೂ ಸೇರಿದ್ದರು. ಅವರೆಲ್ಲರೂ ಅನಾಥ ಬ್ರಾಹ್ಮಣ ಮಕ್ಕಳಾಗಿದ್ದು, ಬೇರೆ ಬೇರೆ ಕಾಲಗಳಲ್ಲಿ ಲಕ್ಷ್ಮೀನಾರಾಯಣನು ಅವರನ್ನು ದತ್ತು ತೆಗೆದುಕೊಂಡು ತನ್ನದೇ ಗೋತ್ರವನ್ನು ಅವರಿಗೆ ನೀಡಿದ್ದನು. ಬ್ರಾಹ್ಮಣರೇ ಆಗಿದ್ದ ಆ ಮಕ್ಕಳು ಹೀಗೆ ಇನ್ನೊಮ್ಮೆ 'ದ್ವಿಜ' ರೆನ್ನಿಸಿದರು. ಇಂತಹ 'ಪುನರಾವಿಷ್ಕೃತ ಬ್ರಾಹ್ಮಣ' ಕುಟುಂಬದ ಎರಡನೆಯ ಪೀಳಿಗೆಗೆ ಸೇರಿದವನು ಗುಣಾಭಿರಾಮ್ ಬರುಆ.

ಆ ಗ್ರಂಥಕ್ಕೆ ಬರೆದಿರುವ ವಿದ್ವತ್ಪೂರ್ಣವಾದ ಪೀಠಿಕೆಯಲ್ಲಿ ಕಂಡುಬರುವಂತೆ ಗುಣಾಭಿರಾಮನ ವ್ಯಕ್ತಿತ್ವ, ಉದ್ಯೋಗ ಹಾಗೂ ಕಾರ್ಯಗಳನ್ನು ಅವುಗಳ ಸಾಮಾಜಿಕ ಹಾಗೂ ಚಾರಿತ್ರಿಕ ಸಂದರ್ಭಗಳಲ್ಲಿಟ್ಟು ನೋಡಿದರೆ ಇದೇ ವಿದ್ವಾಂಸರು ಇಲ್ಲವೆ ಬೇರೆ ಯಾರಾದರೂ ದೂರದ ಜಾಗಗಳಿಂದ ಬಂದು ಅಸ್ಸಾಮನ್ನು ತನ್ನ ವಾಸದ ನೆಲೆಯಾಗಿ ಮಾಡಿಕೊಂಡದ್ದಲ್ಲದೆ ಅಲ್ಲಿ ಅಧಿಕಾರವುಳ್ಳ ಉದ್ಯೋಗ ಹಿಡಿದು ಸಮೃದ್ಧವಾಗಿ ಸಂಪತ್ತನ್ನು ಗಳಿಸಿಕೊಂಡು ಪ್ರತಿಭಾವಂತರೂ ಪ್ರತಿಷ್ಠಾವಂತರೂ ಆದ ಮಕ್ಕಳನ್ನೂ ಮೊಮ್ಮಕ್ಕಳನ್ನೂ ಹೊಂದಿದಂಥ ಆ ಅಪರಿಚಿತ ರಹಸ್ಯಮಯ ವ್ಯಕ್ತಿಯ ಬಗ್ಗೆ ಇನ್ನಷ್ಟನ್ನು ಹೇಳಿಯಾರು. ಆತನ ಆ ಮೊಮ್ಮಕ್ಕಳು ಇದರ ವಿರುದ್ಧ ದಿಕ್ಕಿನಲ್ಲಿ ಚಲಿಸುತ್ತಾ ಅಸ್ಸಾಮಿನಿಂದ ಹೊರಗೆ ಹೋಗಿ ಹೀಗೆಯೇ ಪ್ರತಿಷ್ಠೆ ಗಳಿಸಿದ್ದನ್ನೂ ಹೇಳಿಯಾರೆಂದು ಆಶಿಸುವಂತೆ ಆಗುತ್ತದೆ.

'ರಾಮ ನಬಮಿ ನಾಟಕ್' ರಾಮಚಂದ್ರ ಎಂಬ ಯುವಕ ಹಾಗೂ ನಬಮಿ (ನವಮಿ) ಎಂಬ ವಿಧವೆಯುವತಿಯ ದುರಂತ ಪ್ರೇಮದ ವೃತ್ತಾಂತವುಳ್ಳ ನಾಟಕ. ಅಂದಿನ ವಿವಾಹ ವ್ಯವಸ್ಥೆ, ಮದುವೆಯ ಒಳಗಿನ ಹಾಗೂ ಅದರ ಹೊರಗಿನ ಲೈಂಗಿಕ ಪ್ರೇಮ, ವಿಧವೆಯರ ಮೇಲೆ ಬಲವಂತವಾಗಿ ಹೇರಿರುವ ದಮನಕಾರಿ, ಆತ್ಮವಿನಾಶಕಾರಿ ದಿಗ್ಬಂಧನ ಹಾಗೂ ಶೋಷಣೆಗಳು ಅವರನ್ನು ಬದುಕಲೂ ಅವಕಾಶ ಕೊಡದೆ ಇರುವ ಸ್ಥಿತಿ, ಸ್ತ್ರೀ ಶಿಕ್ಷಣ, ಮಹಿಳೆಯರ ಓದುಗಾರಿಕೆ ಹವ್ಯಾಸ ಮುಂತಾದ ಆ ಕಾಲದ ಮಹಿಳಾ ವಿಷಯಗಳನ್ನು ತುಂಬ ದಿಟ್ಟತನದಿಂದ ನೇರವಾಗಿ ಆಧುನಿಕವಾದ ಉನ್ನತಸ್ತರದ ಸೂಕ್ಷ್ಮತೆಯಿಂದ ಈ ಕೃತಿಯು ಹೇಗೆ ನಿರ್ವಹಿಸುತ್ತದೆ ಎಂದರೆ ಅದರ ರಚನೆಯಾಗಿ 150 ವರ್ಷಗಳಾಗಿದ್ದರೂ ಇಂದಿಗೂ ಅದರಲ್ಲಿನ ಧೈರ್ಯ ಎದೆಗಾರಿಕೆ ಚೇತೋಹಾರಿಯಾಗಿ ಕಾಣಿಸುತ್ತದೆ. ಧನದಾಹಿಯಾಗತೊಡಗಿದ್ದ ಆರ್ಥಿಕ ವ್ಯವಸ್ಥೆ, ಅದರೊಳಗಿನ ಸಾಮಾಜಿಕ ಹಾಗೂ ಬೌದ್ಧಿಕ ವಿನೋದಗಳತ್ತ ಒಂದು

ಇಣಕು ನೋಟವನ್ನು ಈ ಕೃತಿಯು ಒದಗಿಸುತ್ತದೆ. ನಿಜವಾಗಿ ಹೇಳುವುದಾದರೆ ವಸಾಹತುವಾದವು ಸೃಷ್ಟಿಸಿದ್ದ ತಾತ್ತ್ವಿಕತೆ ಹಾಗೂ ಕಾರ್ಯವೈಖರಿಗಳು ಒಂದೇ ಬಾರಿಗೆ ಬಿಡುಗಡೆಯನ್ನೂ ದಾಸ್ಯವನ್ನೂ ಬಲಪಡಿಸುವಂಥವು. ಅವುಗಳ ಪರಿಣಾಮವಾಗಿ ಹಳತು ಮತ್ತು ಹೊಸ ವಿಚಾರಗಳ ಸಂಘರ್ಷಗಳು ಉಂಟಾಗುತ್ತಿದ್ದ ಸ್ಥಿತಿಯ ವಾಸ್ತವ ಚಿತ್ರಣದ ಮೂಲಕ ಈ ನಾಟಕವು ಹತ್ತೊಂಬತ್ತನೆಯ ಶತಮಾನದ ಅಸ್ವಾಮಿನ ಸೆಕ್ಯುಲರ್ ಪ್ರಪಂಚವನ್ನೇ ಮತ್ತೆ ಸೃಷ್ಟಿಸುತ್ತದೆ.

ನಾಟಕದ ಕಥೆ ಸರಳವಾದದ್ದು. ನಬಮಿಯ ಯುವ ಪತಿ ಕಾಲರಾರೋಗಕ್ಕೆ ಬಲಿಯಾಗಿ ಸತ್ತುಹೋಗಿದ್ದು, ನಬಮಿಯ ತಾಯ್ತಂದೆಗಳು ಮತ್ತು ನೆರೆಹೊರೆಯವರು ಗೋಳಾಡುವ ದೃಶ್ಯದೊಂದಿಗೆ ನಾಟಕವು ಆರಂಭವಾಗುತ್ತದೆ. ಗ್ರಹಚಾರದ ದುಷ್ಪ್ರಭಾವವೇ ಈ ದುರ್ಘಟನೆಗೆ ಮೂಲವೆಂದು ಅವರೆಲ್ಲ ಆರೋಪಿಸುತ್ತಿರುವಾಗಲೇ ನಬಮಿಯ ಗೆಳತಿಯೊಬ್ಬಳು "ಅವಳಿಗೆ ಒಂದೋ ಎರಡೋ ಮಕ್ಕಳಾದ ಮೇಲಾದರೂ ಈ ಅವಗಢವು ಉಂಟಾಗಿದ್ದರೆ ಪರಿಸ್ಥಿತಿ ಬೇರೆಯೇ ಆಗಿರುತ್ತಿತ್ತು" ಎಂದು ಹಲುಬುತ್ತಾಳೆ.

ಇವರ ನೆರೆಮನೆಯ ಯುವಕ ರಾಮಚಂದ್ರ ತನ್ನ ಊರಿನಿಂದ ದೂರಬಂದು ಚಿಕ್ಕಪ್ಪನ ಮನೆಯಲ್ಲಿದ್ದವನು ತುಂಬ ಮಾನಸಿಕ ಕ್ಷೋಭೆ, ಅಶಾಂತಿಗಳಿಗೆ ಒಳಗಾಗಿದ್ದಾನೆ. ಕಾರಣ ಏನೆಂದು ಅವನಿಗೇ ತಿಳಿಯದು. ಅವನ ಆಪ್ತಮಿತ್ರ ಕಾಮದೇವ, ಲೋಕ ವ್ಯವಹಾರ ತಿಳಿದಿದ್ದವನು. ಇವನಿಗಾಗಿರುವ ವ್ಯಥೆ ಹಾಗೂ ಕಳವಳಗಳ ಮೂಲಕಾರಣ ಹಾಗೂ ಪರಿಹಾರವನ್ನು ವಿವರಿಸಿ ಹೇಳುತ್ತಾನೆ. ರಾಮಚಂದ್ರನಿಗೆ ಈಗ ಒಬ್ಬ ಹೆಂಡತಿಯ ಅವಶ್ಯಕತೆ ಇದೆ ಎಂಬುದೇ ಅವನ ವಿವರಣೆಯ ತಾತ್ಪರ್ಯ.

ಹದಿಹರೆಯದವರಲ್ಲಿ ಸಾಮಾನ್ಯವಾಗಿ ಹೆಂಗಸರು ಮತ್ತು ಕಾಮದ ಬಗ್ಗೆ ಇರುವ ತಿರಸ್ಕಾರ ಭಾವಕ್ಕೆ ತಕ್ಕ ಹಾಗೆ ರಾಮಚಂದ್ರ ಅವನ ಸಲಹೆಯನ್ನು ಜಿಗುಪ್ಸೆಯಿಂದ ನಿರಾಕರಿಸುತ್ತಾನೆ. ಅದು ಅವನ ಗೆಳೆಯನನ್ನೇನೂ ಮೋಸಗೊಳಿಸದು. ಮತ್ತೊಂದು ಕಡೆ ನಬಮಿ ಹಾಗೂ ಅವಳ ಇಬ್ಬರು ಗೆಳತಿಯರ ಸಂಭಾಷಣೆ ನಡೆದಿದೆ. ಆ ಗೆಳತಿಯರಲ್ಲಿ ಜಯಂತಿ ಒಬ್ಬ ವಿವಾಹಿತೆ, ಊರ್ವಶಿ ಒಬ್ಬ ವಿಧವೆ. ನವಮಿ ತಾನು ಮುಟ್ಟಾಗಲು ಆರಂಭಿಸಿದಾಗಿನಿಂದ ತನಗೆ ಕಳವಳ ಗೊಂದಲ ಅಶಾಂತಿಗಳು ಎಂದು ಹೇಳಿಕೊಂಡರೆ, ಜಯಂತಿಯು "ಈ ಪಾಪದ ಹುಡುಗಿಗೆ ತನ್ನ ಗಂಡನ ಬಳಿಗೆ ಹೋಗುವ ಅವಕಾಶ ಕೂಡ ಸಿಕ್ಕಲೇ ಇಲ್ಲ" ಎಂದು ಅವಳ ಅಶಾಂತಿಯ ಕಾರಣವನ್ನು ವಿಶ್ಲೇಷಿಸುತ್ತಾಳೆ.

ಇವರು ಒಂದು ತೋಟದಲ್ಲಿ ಹೋಗುತ್ತಿರುತ್ತಾರೆ. ಆಗ ಒಂದು ದುಂಬಿ ಬಂದು ನಬಮಿಯ ಮುಖದ ಸುತ್ತ ಹಾರಾಡತೊಡಗುತ್ತದೆ. ಆಗ ಅವರವರೇ ಆಡಿಕೊಳ್ಳುವ ಮಾತುಗಳಿವು:

ಊರ್ವಶಿ : ಅಯ್ಯೋ ಈ ದುಂಬಿ ನಿನ್ನನ್ನು ಇದೀಗ ಅರಳಿದ ತಾವರೆ ಅಂತ ತಿಳಿದಿರಬೇಕು ಕಣೆ!

ಜಯಂತಿ : ಗೆಳತಿ ಹೇಳ್ತಾ ಇರೋದು ಸರಿಯಾಗಿಯೇ ಇದೆ. ನೀನು ನಿಜವಾಗಿಯೂ ಈಗಷ್ಟೇ ಅರಳ್ತಾ ಇರೋ ಹೂವು. ನಿನ್ನ ಮಧುವನ್ನು ಯಾರೂ ರುಚಿ ನೋಡಿಲ್ಲ!

ನಬಮಿ : ನಿನ್ನದೇನು ಕಥೆಯೋ?

ಜಯಂತಿ : (ನಗುತ್ತಾ) ನಮ್ಮಂಥವರ ಹತ್ತಿರ ಈಗ ಯಾವ ಮಧುವೂ ಉಳಿದಿರದು! ಅದೆಲ್ಲ ಈಗ ಸಕ್ಕರೆ ಜೋನಿಯಾಗಿ ಹೋಗಿದೆ. ಅನುಭವಸ್ಥನೊಬ್ಬ ಅದನ್ನೂ ಚೆನ್ನಾಗಿ ಹೀರಬಲ್ಲವನಾದರೆ ಈಗಲೂ ಜೇನನ್ನು ಹಿಂಡಿಕೊಳ್ಳಬಲ್ಲ. ಎಷ್ಟೆಂದರೂ ಅದು ನೀರು ಜೇನು ಅಷ್ಟೆ. ನಿನ್ನಂತೆ ಅಲ್ಲವಮ್ಮ. ಸಾಧಾರಣ ಅನುಭವ ಇರೋರು ಬೇಕಾದರೆ ನಮ್ಮ ಈ ಕಾಕಂಬಿಯನ್ನೂ ಹೀರಬಹುದು. ಹೊಸದಾಗಿ ದೀಕ್ಷೆ ತೊಟ್ಟವನು ಬರೀ ಸಕ್ಕರೆ ಜೇನಿಯನ್ನಷ್ಟೇ ಪಡೀತಾನೆ ಪೂರಾ ಅನನುಭವಿಯಾಗಿದ್ದವನಿಗೆ ಏನೂ ಸಿಗಲಾರದು.

ಇಂಥ ದ್ವಂದ್ವಾರ್ಥವುಳ್ಳ ಸಂಭಾಷಣೆಗಳ ಅನೇಕ ಭಾಗಗಳು ಲೈಂಗಿಕತೆ ಹಾಗೂ ಕುಚೋದ್ಯಗಳ ನಡುವೆ ಹೊಯ್ದಾಡುತ್ತಿರುವಂತೆ ಅವರು ರಾಮಚಂದ್ರನಿಗೆ ಎಡತಾಗುತ್ತಾರೆ. ರಾಮಚಂದ್ರ ಜಯಂತಿಯ ಮೈದುನ (ಅವಳ ಗಂಡನ ಒಬ್ಬ ಕಿರಿಯ ಕಸಿನ್, ಉತ್ತರ ಭಾರತದಲ್ಲಿ ಅತ್ತಿಗೆ ಮೈದುನರ ನಡುವೆ ಖುಷಿಯ, ಸಲಿಗೆಯ ಸಂಬಂಧ ತುಂಬ ಸಹಜವೆನಿಸುತ್ತದೆ. ಮಾನವಶಾಸ್ತ್ರಜ್ಞರ ಮಾತಿನಲ್ಲಿ ಹೇಳುವುದಾದರೆ ಇದು 'Jocking Relationship'. ಈ ಸಂಬಂಧದಿಂದಲೇ ನಾಟಕದಲ್ಲಿ ಜಯಂತಿಗೆ ಅವಳು ನಿರ್ವಹಿಸುವ ಪಾತ್ರವನ್ನು ನಡೆಸಲು ಸಾಧ್ಯವಾಗುತ್ತದೆ.)

ರಾಮಚಂದ್ರ ಒಂದು ಮರದ ಬುಡದಲ್ಲಿ ಕುಳಿತಿದ್ದಾನೆ. ಜಯಂತಿಯ ಜೊತೆಗಿನ ಮಾತುಕತೆಯ ಸಂದರ್ಭದಲ್ಲಿ ಉದ್ದಕ್ಕೂ ನಬಮಿ ಮತ್ತು ರಾಮಚಂದ್ರ ಪರಸ್ಪರರ ಇರವನ್ನು ಗಮನಿಸದವರ ಹಾಗೆ ತೋರಿಸಿಕೊಂಡರೂ ಒಬ್ಬರೊಬ್ಬರನ್ನು ಕಳ್ಳನೋಟಗಳಿಂದ ಪರೀಕ್ಷಿಸುತ್ತಾ ಮೆಚ್ಚಿಕೊಳ್ಳುತ್ತಲೂ ಇರುತ್ತಾರೆ. ನಬಮಿಯ ನಿರಲಂಕಾರದ ವೇಷ ಕಂಡು ಅವಳು ವಿಧವೆಯಿರಬೇಕು ಎಂದು ರಾಮಚಂದ್ರ ಊಹಿಸಿಕೊಳ್ಳುತ್ತಾನೆ.

ನಬಮಿಯ ಭಾವನೆಗಳು ಅವಳ ದೀರ್ಘವಾದ ಸ್ವಗತದ ಮಾತುಗಳಲ್ಲಿ ಸ್ಪಷ್ಟವಾಗಿ ವ್ಯಕ್ತವಾಗುತ್ತವೆ. ಇವನನ್ನು ನೋಡಬೇಕು, ಇವನ ಜೊತೆ ಒಂದಿಷ್ಟು ಮಾತನಾಡಬೇಕು ಅನ್ನೋ ನನ್ನ ಆಸೆ ಈಡೇರೋದು ಹೇಗೆ? ನಾನು ವಿಧವೆ ತಾನೆ. ನಾನು ಯಾವ ಪುರುಷನನ್ನೂ ನೋಡಬಾರದು ಅಂತ ಹೇಳ್ತಾರೆ. ಆದರೆ ಹಾಗೆ ಏಕೆ ಇರಬೇಕು. ನಾನು ವಿಧವೆ ನಿಜ, ಆದರೆ ಇಂದ್ರಿಯಗಳ ಸುಖಗಳನ್ನ ಅನುಭವಿಸೋದಕ್ಕೆ ದೇವರೇ ಮಾಡಿರೋ ನಿಯಮವನ್ನ ನಾನು ಹೇಗೆ ಮುರಿಯಬಲ್ಲೇ? ನನ್ನ ಈಗಿನ ಅವಸ್ಥೇನೇ ಅದಕ್ಕೆ ಒಂದು ಸಾಕ್ಷಿ ಅಲ್ಲವೆ? ಆದ್ದರಿಂದ ಒಬ್ಬ ಪುರುಷನ ಸಂಗಕ್ಕಾಗಿ ಆಸೆ ಪಡೋದರಲ್ಲಿ ಯಾವ ತಪ್ಪೂ ಇಲ್ಲ. ಮದುವೆ ಅನ್ನೋದರ ನಿಜವಾದ ಗುರಿಯನ್ನ ಯಾರ ಜೊತೆ ಚೆನ್ನಾಗಿ ಸಾಧಿಸಬಹುದೋ ಅವನನ್ನೇ ಪತಿ ಅನ್ನಬಹುದು. ನನ್ನ ಮಟ್ಟಿಗೆ ಇವನೇ ಅಂಥ ಗಂಡನಾಗಲು ಸಾಧ್ಯ... ಮೊದಲ ಪತಿ ತೀರಿಹೋದರೆ ಇನ್ನೊಂದು ಮದುವೆ ಆಗಬಾರದು ಅಂತ ಶಾಸ್ತ್ರಗಳು ಹೇಳಬಹುದು. ಹಾಗೆ ಹೇಳಿದ್ರೆ ತಾನೇ ಏನು? ಶಾಸ್ತ್ರ ಅನ್ನೋದಾದರೂ ಏನು? ದೈವನಿಯಮಕ್ಕೂ ಮಿಗಿಲಾದ ಶಾಸ್ತ್ರ ಯಾವುದಿದೆ?

ನಾಟಕಕಾರನು 'ದೈವನಿಯಮ' ಎಂಬುದನ್ನು ನೋಡಿರುವ, ವ್ಯಾಖ್ಯಾನಿಸಿರುವ ರೀತಿಯಲ್ಲಿ ಅದು 'ಪ್ರಕೃತಿ ನಿಯಮ'ವೇ ಹೊರತು ಬೇರೇನೂ ಅಲ್ಲ. ನಾಟಕದ ಮೂರನೆಯ ಅಂಕದ ನಾಲ್ಕನೆಯ ದೃಶ್ಯದಲ್ಲಿ

ಜಯಂತಿಯ ಸಹಾಯದಿಂದ ಪ್ರೇಮಿಗಳಿಬ್ಬರೂ ಜಯಂತಿಯ ಮನೆಯಲ್ಲಿ ಅವಳ ಶಯನಗೃಹದಲ್ಲೇ ಪ್ರೇಮಕ್ಕೆ ತೊಡಗಿ ಒಬ್ಬರನ್ನು ಒಬ್ಬರು ಕಂಡುಕೊಳ್ಳುತ್ತಾರೆ. ಎಂಬುದರಲ್ಲಿ ಕೃತಿಕಾರ ಹೇಳುತ್ತಿರುವ ದೈವನಿಯಮದ ಅರ್ಥ ಪೂರ್ತಿ ಖಚಿತಪಡುತ್ತದೆ.

ನಬಮಿ : ಓಹ್! ಪ್ರೇಮದಲ್ಲಿ ಕೂಡುವುದು ಎಂಥ ಸುಖ! ನಮಗೆ ಇಂಥ ಆನಂದವನ್ನು ನಿರಾಕರಿಸುವವರು ನಾಶವಾಗಲಿ!

ಮಾರನೆಯ ಬೆಳಿಗ್ಗೆ ಜಯಂತಿ ನಬಮಿಯನ್ನು ಛೇಡಿಸುತ್ತಾಳೆ.

"ಆಹಾ! ಹೇಗಾಯ್ತು ಇದೆಲ್ಲ! ಒಂದೇ ರಾತ್ರಿಯಲ್ಲಿ ಎಲ್ಲ ಅಸ್ತವ್ಯಸ್ತ! ನಿನ್ನ ಕೂದಲು ಬಿಚ್ಚಿಹೋಗಿದೆ, ಮುಖದಲ್ಲಿದ್ದ ನುಣುಪೇ ಮಾಯವಾಗಿದೆ. ಕಣ್ಣುಗಳು ಊದಿಕೊಂಡಿವೆ! ರಾತ್ರಿ ಎಷ್ಟು ಹೊತ್ತಿನವರೆಗೂ ಎಚ್ಚರವಿದ್ದಿ ಹಾಗಾದರೆ?"

ಮುಂದೆ ನಾಟಕದಲ್ಲಿ ಎದುರಾಗುವ ದುರಂತಕರ ಅವಸಾನ, ಎಲ್ಲ ನೀತಿಬೋಧಕ ನಾಟಕಗಳಲ್ಲಿರುವಂತೆಯೆ, ತುಂಬ ಹಿಂಸೆ, ಕ್ರೌರ್ಯಗಳುಳ್ಳದ್ದಾಗಿದೆ. ನಬಮಿ ಗರ್ಭಿಣಿಯಾಗುತ್ತಾಳೆ. ಅದರಿಂದ ನಾನಾ ರೀತಿಯ ಅಪವಾದ ನಿಂದೆ ಆಡಿಕೆ ಮಾತುಗಳು ಅವಳ ಬಗ್ಗೆ ಹುಟ್ಟಿಕೊಳ್ಳುತ್ತವೆ. ಊರಿನ ಧಾರ್ಮಿಕ ಮುಖಂಡ, ನೀತಿರಕ್ಷಣೆಯ ಹೊಣೆ ಹೊತ್ತವನೂ ಆಗಿರುವ 'ಮಹಾಜನ್' ಅವಳ ತಂದೆ ಶಿಬಕಾಂತನಿಗೆ 500 ರೂಪಾಯಿಗಳ ದಂಡವನ್ನು ತೆರದೆ ಹೋದಲ್ಲಿ ಅವರ ಕುಟುಂಬಕ್ಕೆ ಬಹಿಷ್ಕಾರ ಹಾಕುತ್ತೇನೆಂದು ಬೆದರಿಸುತ್ತಾನೆ. ನಬಮಿಗೆ ದುಃಖವೋ ದುಃಖ ಆದರೆ ಅವಳಲ್ಲಿ ಕಿಂಚಿತ್ತೂ ಪಾಪಭಾವನೆಯಿಲ್ಲ. ('ನನಗೆ ಚೆನ್ನಾಗಿ ಗೊತ್ತಿದೆ, ನಾನು ಯಾವ ತಪ್ಪನ್ನೂ ಮಾಡಿಲ್ಲ') ದುಃಖಾತಿರೇಕದಲ್ಲಿ ಅವಳು ಅಡಕೆಯ ಸಿಪ್ಪೆಹೆರೆಯಲೆಂದು ರಾಮಚಂದ್ರ ತನಗೆ ಕೊಟ್ಟಿದ್ದ ಚಾಕುವಿನಿಂದ ತನ್ನನ್ನೇ ಇರಿದುಕೊಂಡು ಪ್ರಾಣಬಿಡುತ್ತಾಳೆ. ಜಯಂತಿ ಕೂಡ ಅವಳನ್ನೇ ಅನುಸರಿಸುತ್ತಾಳೆ. ರಾಮಚಂದ್ರ ಕೂಡ "ಓ ನನ್ನ ಧರ್ಮವೆ! ನೀನೇ ನನಗೆ ಸಾಕ್ಷಿ! ಇವೆಲ್ಲ ಈ ದುಷ್ಟ ಸಮಾಜದ ಕ್ರೂರ ಪದ್ಧತಿಗಳ ಫಲವಷ್ಟೆ, ಓ ಪ್ರಿಯೆ ನಬಮಿ, ಓ ದೇವರೆ!" ಎಂದು ಉದ್ಗರಿಸಿ ನೇಣುಹಾಕಿಕೊಳ್ಳುತ್ತಾನೆ.

ಮಹಾಜನನಿಗೆ ಕನಸೊಂದು ಬೀಳುತ್ತದೆ. ಆ ಕನಸಿನಲ್ಲಿ ಪರಾಶರ ಮಹರ್ಷಿ (ವಿಧವೆ ಮರುಮದುವೆ ಆಗಬಹುದೆಂದು ತನ್ನ ಸ್ಮೃತಿಗ್ರಂಥದಲ್ಲಿ ಸಾರಿ ಹೇಳಿದವನು!) ಮತ್ತು ಪಂಡಿತ ಈಶ್ವರಚಂದ್ರ ವಿದ್ಯಾಸಾಗರರು (ವಿಧವಾ ವಿವಾಹವನ್ನು ಬೆಂಬಲಿಸಿ ಪ್ರಚಾರ ಮಾಡಿದ್ದ ಸಮಾಜ ಸುಧಾರಕರು ಅವರು). ಈ ಎಲ್ಲಾ ದುರಂತಕ್ಕೆ ತಾನೇ ಕಾರಣವೆಂದು ಅವರಿಬ್ಬರೂ ತನ್ನನ್ನು ದೂಷಿಸುವಂತೆ ಅನ್ನಿಸಿ ಅವನಿಗೆ ಹೆದರಿಕೆಯಾಗುತ್ತದೆ. ಆಮೇಲೆ ಆ ಮಹಾಜನ **'ನಬಮಿ ಒಬ್ಬ ನಿಷ್ಕಳಂಕ ಮಹಿಳೆ'**ಯೆಂದು ಘೋಷಿಸುತ್ತಾನೆ.

ನಾಟಕದ ಕೊನೆಗೆ ಬರುವ ಭರತವಾಕ್ಯವು ಒಂದು ಮಂತ್ರಘೋಷದ ಹಾಗಿದೆ. ವಿಧವೆ ಮತ್ತೆ ಮದುವೆ ಆಗಬಹುದೆಂದು ಶಾಸ್ತ್ರಗಳೂ ಸಾರುವುದರಿಂದ ಅದು ಶಾಸ್ತ್ರಸಮ್ಮತವಾದ ನ್ಯಾಯಯುತವಾದ ವಿಧಿಯೆಂದು



ಸೂಚಿಸುವ ನುಡಿಗಳಿವು. ಸಾಂಪ್ರದಾಯಿಕ ವಿಧಿಯೊಳಗಿನಿಂದಲೇ ಆಧುನಿಕತೆಯ ಕಡೆಗೆ ಹೊರಳಿಸುವ ದಿಕ್ಕನ್ನು ಬದಲಾಯಿಸುವ ಸೂಚನೆ ಇದರಲ್ಲಿದೆ. ದೇಹದ ಬಯಕೆಗಳು ಪ್ರಕೃತಿ ನಿಯಮದ ಭಾಗವೆಂದೂ, ಅದು ದೈವನಿಯಮಕ್ಕಿಂತ ಬೇರೆ ಅಲ್ಲವೆಂದೂ ತೋರಿಸುವ ಯತ್ನ ಇಲ್ಲಿದೆ.

ವಿಧವೆಯರು ಮದುವೆಯಾಗಿ ಸುಖವಾಗಿರ ಬೇಕೆಂಬುದನ್ನು ದೇವರು ಅಪೇಕ್ಷಿಸದಿದ್ದಲ್ಲಿ ಪತಿ ತೀರಿಕೊಂಡಮೇಲೂ ಹೆಣ್ಣಿನ ದೇಹ ನೈಸರ್ಗಿಕ ಸಂತೃಪ್ತಿಗಾಗಿ ಹಂಬಲಿಸುವುದು ಹೇಗೆ ಸಾಧ್ಯ? ಅವೆಷ್ಟು ಪ್ರಕೃತಿ ಸಿದ್ಧವೆಂದರೆ ಅವಳಲ್ಲಿ ಅವು ನೂರು ವಿಧಗಳಲ್ಲಿ ಹೊಮ್ಮುತ್ತಿರುತ್ತವೆಯೆಂಬುದನ್ನು ಈ ಕೃತಿ ಸೂಚಿಸುತ್ತದೆ.

ನಾಟಕಕರ್ತೃವು ಬ್ರಾಹ್ಮೋಧರ್ಮವನ್ನೂ ಈಶ್ವರಚಂದ್ರ ವಿದ್ಯಾಸಾಗರ ಅವರ ವಿಚಾರಗಳನ್ನೂ ಒಪ್ಪಿದವನು. ಆದರೆ ನಾಟಕದ ನಿರ್ದಿಷ್ಟ ರಚನೆಗಳು ಅವುಗಳಿಗಿಂತ ಭಿನ್ನವಾದ ಧ್ವನಿ ಪಡೆಯುತ್ತವೆ ಎಂಬುದು ಈ ನಾಟಕದ ತುಂಬಗಮನಾರ್ಹ ಅಂಶವಾಗಿದೆ. ಆ ಬಂಗಾಲಿ ಸಮಾಜ ಸುಧಾರಕನು ಯಾವುದಕ್ಕೂ ಹೇಸದ ನಿರ್ಲಜ್ಜ ಶಕ್ತಿಗಳ ಚಿತಾವಣೆಗೆ, ಶೋಷಣೆಗಳಿಗೆ ಬಲಿಪಶುಗಳಾಗಬಾರದು, ಎಂದು ಅದನ್ನು ತಪ್ಪಿಸಲೆಂದೇ ವಿಧವೆಯರ ಮದುವೆ ಮಾಡುವುದನ್ನು ಬಯಸಿದ್ದನು. ಆದರೆ ಗುಣಾಭಿರಾಮ ಬರುಆ ವಿಧವೆಯರು ಏಕಾಂಗಿಗಳಾಗಿಯೇ ಉಳಿದಿರಬೇಕೆಂದು ಬಲವಂತಪಡಿಸುವ ಸಮಾಜದಲ್ಲಿ ಆ ಮಹಿಳೆ ಯರು ನೈಸರ್ಗಿಕ

ಒತ್ತಡಗಳ ಪೂರೈಕೆಗೇ ವಿಧವಾ ವಿವಾಹ ಅವಶ್ಯಕ ಎಂದು ನೋಡಿರುತ್ತಾನೆ. ಸಾಂಪ್ರದಾಯಿಕ ವಿವಾಹಕ್ಕೆ ಬಾಹಿರವಾದ ದೈಹಿಕ ಪ್ರೇಮವೇನೂ ಪಾಪವಲ್ಲ ಎಂಬ ಈ ನಾಟಕದ ದೃಷ್ಟಿಕೋನದಲ್ಲಿಯೇ ಕ್ರಾಂತಿಕಾರಕತೆಯಿದೆ. ದೇಹದ ಬಯಕೆ ಹಾಗೂ ಭಾವನಾತ್ಮಕ ಪ್ರೇಮಗಳೆರಡಕ್ಕೂ ಸಮಾನವಾಗಿ ಇಲ್ಲಿ ಒತ್ತು ನೀಡಲಾಗಿದೆ.

ಈ ನಾಟಕವನ್ನು ನೂರೈವತ್ತು ವರ್ಷಗಳ ಹಿಂದೆ ರಚಿಸಿದಾಗ ಆ ಲೇಖಕನಿಗೆ ಇನ್ನೂ 20ರ ಹರೆಯ. ಕಲ್ಕತ್ತಾದಿಂದ ಒಂದು ಸ್ಟೀಮರ್‌ನಲ್ಲಿ ಗುವಾಹಟಿಯತ್ತ ಆತ ಪ್ರಯಾಣ ಹೊರಟಿದ್ದನು. ಅದು ಹದಿನಾರು ದಿನಗಳ ಪ್ರಯಾಣ. ಅವನ ಒಬ್ಬ ಹಿರಿಯ ಬಂಧುವಿನ ಕರೆಯ ಮೇರೆಗೆ, ಆತ ತನಗಾಗಿ ನೋಡಿ ಗೊತ್ತುಮಾಡಿದ್ದ ಹುಡುಗಿಯನ್ನು ವಿವಾಹವಾಗಲಿಕ್ಕಾಗಿ ತನ್ನ ಊರಿಗೆ ಹಿಂದಿರುಗುತ್ತಿದ್ದ. ಆತ ಆ ವೇಳೆಗೆ ಬ್ರಾಹ್ಮೋಧರ್ಮದಲ್ಲಿ ಬಲವಾದ ಬೌದ್ಧಿಕ ಬದ್ಧತೆಯನ್ನು ಬೆಳೆಸಿಕೊಂಡಿದ್ದವನು. ಈಗ ಮತ್ತೆ ಬ್ರಾಹ್ಮಣರ ಕರ್ಮಕಾಂಡಗಳಲ್ಲಿ ಸೇರಿಕೊಳ್ಳುವ ಇಚ್ಛೆ ಅವನಿಗೆ ಇರಲಿಲ್ಲ. ಗುಣಾಭಿರಾಮನ ಮನದ ಈ ಭಾವನೆಗಳು ಪ್ರಯಾಣದ ಅವಧಿಯಲ್ಲಿ ಆ ನಾಟಕವನ್ನು ಬರೆಯುವಲ್ಲಿ ಪ್ರಭಾವ ಬೀರಿವೆ.

ಅದೇನೇ ಇದ್ದರೂ, ಮದುವೆ ವಿಷಯದಲ್ಲಿ ಆಗ ಅವನಿಗೆ ಹೆಚ್ಚಿನ ಆಯ್ಕೆಗೆ ಅವಕಾಶ ಇರಲಿಲ್ಲವಾಗಿ ತನಗೆ ನಿಶ್ಚಿತವಾಗಿದ್ದ ಬ್ರಜಸುಂದರೀದೇವಿಯನ್ನೇ ಕೈಹಿಡಿದನು. ಆಕೆ ಅನುರೂಪದ ಪತ್ನಿಯಾಗಿ ತುಂಬ ಪ್ರೀತಿಯಿಂದ ಅವನನ್ನು ನೋಡಿಕೊಂಡಳು ಎಂಬುದನ್ನು ತನ್ನ ನಾಟಕದ ಪೀಠಿಕೆಯಲ್ಲಿ ಅವನು ಸ್ಮರಿಸಿದ್ದಾನೆ. ಆಕೆ ತೀರಿಹೋದ ಬಳಿಕ 1870ರಲ್ಲಿ ಬ್ರಾಹ್ಮೋನಂಬಿಕೆಗಳಿಗೆ ಅನುಗುಣವಾದ ವಿಧಿಯೊಂದಿಗೆ ವಿಷ್ಣುಪ್ರಿಯಾದೇವಿ ಎಂಬಾಕೆಯನ್ನು ಆತನು ಮದುವೆಯಾದನು. ಅವನ ಮೃತ ಸ್ನೇಹಿತನೊಬ್ಬನ ವಿಧವೆಯಾಗಿದ್ದ ವಿಷ್ಣುಪ್ರಿಯಾದೇವಿಯನ್ನು ವಿವಾಹವಾಗುವಲ್ಲಿ 30ರ ವಯಸ್ಸಿನಲ್ಲಿ ತಾನು ಆ ನಾಟಕದಲ್ಲಿ ಪ್ರಚಾರ ಮಾಡಿದ್ದುದನ್ನು ಕಾರ್ಯತಃ ಮಾಡಿತೋರಿಸಿದ್ದನು. ಈಕೆ ಅವನಿಗೆ ಸ್ವರ್ಣಲತಾ ಎಂಬ ಒಬ್ಬ ಮಗಳನ್ನೂ ನಾಲ್ವರು ಪುತ್ರರನ್ನೂ ಹೆತ್ತುಕೊಟ್ಟಳು. ನಿವೃತ್ತಿ ಹೊಂದಿದ ಬಳಿಕ ಗುಣಾಭಿರಾಮನು ಕಲ್ಕತ್ತಾದಲ್ಲಿಯೇ ನೆಲೆಸಿದ್ದನು. ತಾನು ಸಾಯುವಾಗ 50,000 ರೂಪಾಯಿಗಳ ಸಂಪತ್ತನ್ನು ಕುಟುಂಬ ದವರಿಗಾಗಿ ಬಿಟ್ಟುಹೋದನು. ಆ ಕಾಲಕ್ಕೆ (1894) ಅದು ಬಹುದೊಡ್ಡ ಸಂಪತ್ತೇ ಸರಿ. ನಿಜವಾಗಿ ಆತ ಒಬ್ಬ ಪರಿಪೂರ್ಣ ಮನುಷ್ಯನಾಗಿದ್ದ.

ಈ ಗ್ರಂಥವನ್ನು ಸಂಪಾದಿಸಿರುವವರು ಮತ್ತು ಪ್ರಕಾಶಕರು ಇಂತಹ ಮಹತ್ವದ ನಾಟಕವೊಂದನ್ನು ಇಂಗ್ಲಿಷ್ ಭಾಷೆಯಲ್ಲಿ ನಮಗೆ ದೊರಕಿಸಿಕೊಟ್ಟಿರುವುದಕ್ಕಾಗಿ ನಮ್ಮ ಕೃತಜ್ಞತೆ ಹಾಗೂ ಧನ್ಯವಾದಗಳಿಗೆ ಅರ್ಹರಾಗಿದ್ದಾರೆ. ಪುಸ್ತಕ ರೂಪದಲ್ಲಿ ಈ ನಾಟಕವು ಮೊದಲ ಸಲ ಮುದ್ರಣ ಕಂಡ 130 ವರ್ಷಗಳ ಬಳಿಕ ಮೊದಲಬಾರಿ ಇದರ ಇಂಗ್ಲಿಷ್ ಅನುವಾದವು ಹೊರಬಂದಿದೆ. ಈ ನಾಟಕವು ಎಷ್ಟು ಮಹತ್ವವುಳ್ಳದ್ದೆಂದರೆ ಅದರ ಸಂಪಾದಕರು ದೀರ್ಘವೂ ಒಳ್ಳೆಯ ವಿದ್ವತ್ಪೂರ್ಣವೂ ಆದ ಮುನ್ನುಡಿಯೊಂದನ್ನು ಅದಕ್ಕೆ ಒದಗಿಸಿದ್ದು, ನಾಟಕವು ಶೋಧಿಸಲೆತ್ನಿಸುವ ವಸ್ತುಗಳನ್ನು ಅವುಗಳ ಸಾಮಾಜಿಕ ಹಾಗೂ ಚಾರಿತ್ರಿಕ ಸನ್ನಿವೇಶದ ನಿರ್ದಿಷ್ಟ ಜಾಗಗಳಲ್ಲಿಟ್ಟು ವ್ಯಾಖ್ಯಾನಿಸಿದ್ದಾರೆಂಬುದು ಈ ಗ್ರಂಥದ ಮೌಲಿಕತೆಯನ್ನು ಹೆಚ್ಚಿಸುತ್ತದೆ. ❑

# ಗುಲಾಮ ಗೋಳು

-ಕೆ. ನೀಲಾ

ಹೇಗೆ ಹೇಳಲಿ ನಾನು
ನಿಮ್ಮ ಬದುಕ ಬಯಕೆಯ
ತೀಟೆಗೆ ಬೇಟೆಯಾಗಿ
ನೀವು ನಡೆದಾಡೋ ಕಾಲುಗಳ ಕೆಳಗಿನ
ಮಾಸಿ ಮಣ್ಣಾಗಿ ಹೋಗುವ
ಅಂಗಳದ ರಂಗೋಲಿಯಾಗಿ
ಹಗಲು ರಾತ್ರಿಗಳಿಗೆ ಅಡ್ಡವಿಟ್ಟ
ಗೋಡೆಗಳ ನಡುವೆ
ಗುಲಾಮಗಿರಿಗೆ ಮೊದಲ ಬಲಿಯಾದದ್ದು
ಹೇಗೆ ಹೇಳಲಿ ನಾನು....?

ಹೇಗೆ ಹೇಳಲಿ ನಾನು
ಕವಿಯ ಕಾವ್ಯಕ್ಕೆ ಭಾವಕೆ
ನಯ ನಾಜೂಕಿನ
ಚಿತ್ತಾರದ ಚಲುವೆಯಾಗಿ ನಿಂತವಳು
ಮನೆ ಕಂಬ ಕಂಬಕೂ
ಆಡಿ ನಲಿದಾಡಲು
ಮಗುವ ಬೇಕೆಂದಾಗ
ಬಾಣಂತ ಕೋಣೆಯಲ್ಲಿ ನೋವಾದವಳು

ಹೇಗೆ ಹೇಳಲಿ ನಾನು
ಇವಳ
ಗಿಡಕ್ಕೆ ಹೂವಾಗಿಸಿ
ಮರಕ್ಕೆ ಬಳ್ಳಿಯಾಗಿಸಿದಿರಿ
ಬೇಕು ಬೇಕೆಂದಾಗ
ಸುಗಂಧ ಸೂಸುವ ಮಾಲೆಯಾಗಿಸಿ
ಬಾಡಿದಾಗ ಬೇಡೆಂದು
ಕಸದೊಟ್ಟಿಗೆ ಕಸವಾಗಿಸಿದಿರಿ

ಕಾಣಲಿಲ್ಲ ಕರುಳ ಒಳಗಿನ ಕತ್ತರಿ
ನೀವು ಹುಟ್ಟು ಹಾಕಿದ ಈ ಪರಿ
ಪ್ರೇಮದೊಳಗಿನ ಶೀಲ
ಬದುಕು ಬಾಳಿಗೆ ಶೂಲ
ಮುಸುಕಾದಿದರೂ ಸಾಕು ಅಲ್ಲೋಲ ಕಲ್ಲೋಲ
ಹೇಗೆ ಹೇಳಲಿ ನಾನು-
ಕಣ್ಣು ಕಟ್ಟಿದ ಗಾಣದೆತ್ತು
ಎಣ್ಣೆ ಯಾರಿಗೋ
ಹಿಂಡಿ ಯಾರಿಗೋ....

ಹೀಗೆ ಚರಿತ್ರೆಯುದ್ಧಕ್ಕೂ
ನಮ್ಮ ಬಾಳು
ಮನೆ-ಮನೆಯ ಮಾಡು-ಗೋಡೆಗೂ
ಗೊತ್ತು ಉಸಿರಾಡುವ ಅತೃಪ್ತ ಜೀವಚ್ಛವಗಳ
"ಗುಲಾಮಗೋಳು"

'ಬದುಕ ಬೀದಿಯ ಪಯಣ'ದಿಂದ
ಕೃಪೆ : ಕ್ರಿಯಾ ಪ್ರಕಾಶನ, ಬೆಂಗಳೂರು



# ಲೋಹಿಯಾ ಎತ್ತಿದ ಮಹಿಳಾ ವಿಚಾರಗಳು

■ ಸಿ.ಜಿ. ಮಂಜುಳಾ

*ಗಾಂಧಿಯ ನಂತರ ಪುರುಷ- ಮಹಿಳೆ ಸಮಾನತೆ ವಿಚಾರಕ್ಕೆ ಹೆಚ್ಚು ಒತ್ತು ನೀಡಿದ ನೇತಾರರೆಂದರೆ ಬಹುಶಃ ಲೋಹಿಯಾ. ರಾಜಕಾರಣದಲ್ಲಿ ಮಾತ್ರವಲ್ಲ ಬದುಕಿನ ಎಲ್ಲಾ ರಂಗಗಳಲ್ಲೂ ಸಕ್ರಿಯ ಪಾತ್ರ ವಹಿಸಲು ಮಹಿಳೆಯರಿಗೆ ಅವರು ಯಾವಾಗಲೂ ಉತ್ತೇಜನ ನೀಡುತ್ತಿದ್ದರು.*

ಲೋಹಿಯಾ ಅವರು ಗಾಂಧಿಯ ಕನಸು, ನೆಹರೂರ ಆಕಾಂಕ್ಷೆ ಹಾಗೂ ಸುಭಾಷ್ ಚಂದ್ರ ಬೋಸ್ ಅವರ ಕ್ರಿಯೆಯನ್ನು ಅಂತರ್ಗತವಾಗಿಸಿಕೊಂಡಿದ್ದವರು ಎಂದು ವರ್ಣಿಸಲಾಗುತ್ತದೆ. ಅತ್ಯಂತ ಸ್ವೋಪಜ್ಞತೆಯ ಚಿಂತಕ ಅವರು. ಅವರು ಎತ್ತಿದ ಪ್ರಶ್ನೆಗಳು ಈಗಲೂ ಪ್ರಶ್ನೆಗಳಾಗಿಯೇ ನಮ್ಮನ್ನು ಕಾಡುತ್ತಿವೆ. 'ಜಾತಿ ಥೋಡೊ' ಜಾತಿ ಗಡಿಗಳನ್ನು ಮುರಿಯಿರಿ ಎಂಬುದು ಅವರ ಬಹು ಮುಖ್ಯ ಸಂದೇಶ. ಆದರೆ ವರ್ಗಸಂಘರ್ಷ, ಜಾತಿ ಸಂಘರ್ಷ ಲೋಹಿಯಾ ಅವರ ಜೀವಿತ ಕಾಲದಲ್ಲಿ ಇದ್ದಷ್ಟೇ ಈಗಲೂ ಸಮಾಜದಲ್ಲಿ ಪ್ರಬಲವಾಗಿದೆ. ಆದರೆ ಲೋಹಿಯಾ ಅವರಂತಹ ಧೀಮಂತ ರಾಜಕೀಯ ನಾಯಕರು ಇಲ್ಲದಿರುವ ಕೊರತೆಯನ್ನು ನಾವು ಕಾಣುತ್ತಿದ್ದೇವೆ.

ಸಾಹಿತಿ ಕಲಾವಿದರ ಸ್ನೇಹವನ್ನು ಇಷ್ಟ ಪಡುತ್ತಿದ್ದವರು ಲೋಹಿಯಾ. ವಿಶೇಷವಾಗಿ ಮಹಿಳೆ ಕುರಿತಂತೆ ಅವರು ಹೊಂದಿದ್ದ ಕೆಲವೊಂದು ವಿಚಾರಧಾರೆಗಳು ಹಾಗೂ ಲೋಕಸಭೆ ಚರ್ಚೆಗಳ ಸಂದರ್ಭಗಳಲ್ಲಿ ಲೋಹಿಯಾ ಎತ್ತಿದ ಮಹಿಳಾ ವಿಚಾರಗಳನ್ನು ಮತ್ತೊಮ್ಮೆ ನೆನಪಿಸಿಕೊಳ್ಳುವ ಯತ್ನ ಇದು.

ಸಮಾಜವಾದ ಎಂಬುದು ಅಪ್ರಸ್ತುತ ಎನ್ನುವ ಕಾಲದಲ್ಲಿದ್ದೇವೆ ನಾವು. ಜಾಗತೀಕರಣದ ಈ ಸಂದರ್ಭದಲ್ಲಿ ಕಾರ್ಪೊರೆಟ್ ಸಂಸ್ಥೆಗಳ ಪರ ಇರುವ ಬಂಡವಾಳಶಾಹಿ ಅರ್ಥವ್ಯವಸ್ಥೆಯತ್ತ ಭಾರತ ಸಾಗಿದೆ. ಹೀಗಿದ್ದಾಗಲೂ "ಎಲ್ಲರನ್ನೂ ಒಳಗೊಳ್ಳುವ ಬೆಳವಣಿಗೆ" ಇನ್‌ಕ್ಲೂಸಿವ್ ಗ್ರೋತ್ ಎಂಬಂತಹ ಮಾತುಗಳು ಲೋಹಿಯಾ ಅವರ ಸಮಾಜವಾದ ಚಿಂತನೆಗೆ ಸಂದ ಜಯ ಎಂದು ಭಾವಿಸಬೇಕು. ಸಮಾನತೆಯ ಬದ್ಧತೆ ಈಗ ರಾಜಕೀಯ ಅಗತ್ಯವೂ ಆಗಿದೆ. ಸಮಾಜದ ದುರ್ಬಲರನ್ನು ಕಡೆಗಣಿಸುವ ಯಾರೂ ಸಾರ್ವಜನಿಕ ಬದುಕಲ್ಲಿ ಕೆರಿಯರ್ ನಿರ್ಮಿಸಿಕೊಳ್ಳುವುದು ಸಾಧ್ಯವಿಲ್ಲ.

ಹೀಗಾಗಿ ಸದ್ಯದ ಸ್ಥಿತಿ, ಲೋಹಿಯಾ ಪ್ರತಿಪಾದಿಸಿದ ಮೌಲ್ಯಗಳಿಗೆಷ್ಟು ಋಣಿಯಾಗಿದೆ ಎಂಬುದನ್ನು ನಾವು ಗುರುತಿಸಬೇಕು. ಲೋಹಿಯಾ ಅವರ ಸಪ್ತಕ್ರಾಂತಿಯ ತತ್ವಗಳಲ್ಲಿ ಅವರು ಮೊದಲ ಸ್ಥಾನ ಕೊಟ್ಟಿದ್ದೇ ಪುರುಷ- ಮಹಿಳೆ ಸಮಾನತೆಗೆ. ಮಹಿಳೆ- ಪುರುಷ ಸಮಾನತೆ ಬಗ್ಗೆ ನಾವು ಸಾಕಷ್ಟು ಮಾತನಾಡುತ್ತೇವೆ. ಸಾಮಾಜಿಕವಾಗಿ ಇತ್ತೀಚಿನ ದಿನಗಳಲ್ಲಿ ಸಾಕಷ್ಟು ಬದಲಾವಣೆಗಳೂ ಆಗಿವೆ. ಮೇಲ್ಪದರದಲ್ಲಿ ಈ ಬದಲಾವಣೆಗಳು ಕಾಣಿಸುತ್ತಿವೆ. ಆದರೆ ಆಳದಲ್ಲಿ ಪುರುಷ ಪ್ರಾಧಾನ್ಯ ಧೋರಣೆಯೇ ಇದೆ. ತೋಳ್ಬಲ, ಹಣಬಲ ವಿಜೃಂಭಿಸುವ ರಾಜಕೀಯ ಕ್ಷೇತ್ರದಲ್ಲಂತೂ ಮಹಿಳಾ ಪ್ರಾತಿನಿಧ್ಯ ಹೇಳಿಕೊಳ್ಳುವ ಮಟ್ಟ ತಲುಪಲೇ ಇಲ್ಲ. ಸ್ವತಂತ್ರ ಭಾರತದ ಈ ಆರು ದಶಕಗಳಲ್ಲಿ ಲೋಕಸಭೆಯಲ್ಲಿ ಮಹಿಳೆಯ ಪ್ರಾತಿನಿಧ್ಯ ಇನ್ನೂ ಶೇ. 10ರ ಪ್ರಮಾಣದಾಚೆಗೆ ಏರಲಿಲ್ಲ.

ಲೋಹಿಯಾ ಅವರ ಜೀವಿತ ಕಾಲದಲ್ಲೂ ಸೋಷಲಿಸ್ಟರಿಗೂ, ಮಹಿಳೆಯನ್ನು ಲೋಕಸಭೆಗೆ ಚುನಾಯಿಸುವುದು ಸಾಧ್ಯವಾಗಲಿಲ್ಲ ಎಂಬುದನ್ನು ಗಮನಿಸಬೇಕು. ಮೊದಲ ಲೋಕಸಭೆಗೆ ಅವರ ಪಕ್ಷದ 12 ಮಂದಿ ಆಯ್ಕೆಯಾಗಿದ್ದರು, ಒಬ್ಬರೂ ಮಹಿಳೆ ಇರಲಿಲ್ಲ.

1957ರಲ್ಲಿ ಲೋಹಿಯಾ ಸಂಸ್ಥಾಪಿಸಿದ ಪಕ್ಷಕ್ಕೆ ಲೋಕಸಭೆಯಲ್ಲಿ 8 ಸ್ಥಾನಗಳು ಸಿಕ್ಕವು. ಆದರೆ ಒಬ್ಬ ಮಹಿಳೆಯೂ ಇರಲಿಲ್ಲ. ನಾಲ್ಕನೇ ಲೋಕಸಭೆಯಲ್ಲಿ ಅವರ ಪಕ್ಷದ 23 ಸದಸ್ಯರಿದ್ದರು. ಆಗಲೂ ಯಾರೂ ಮಹಿಳೆ ಇರಲಿಲ್ಲ. ಇದು ಲೋಹಿಯಾ ಅವರಿಗೆ ಕಹಿಯಾದುದಾಗಿತ್ತು. ಮಹಿಳೆಯನ್ನು ಚುನಾಯಿಸುವ ಅವರ ಅನೇಕ ಪ್ರಯತ್ನಗಳು ವಿಫಲ ವಾದವು.

'ರಾಷ್ಟ್ರದ ಎಲ್ಲಾ ರಾಜಕೀಯ, ಕಾಂಗ್ರೆಸ್, ಕಮ್ಯುನಿಸ್ಟ್ ಅಥವಾ ಸಮಾಜವಾದಿಗಳಿಗೆ ರಾಷ್ಟ್ರೀಯ ಒಪ್ಪಂದಕ್ಕೆ ಬರಲು ಒಂದು ದೊಡ್ಡ ವಿಚಾರ ಇದೆ. ಏನೆಂದರೆ ಉದ್ದೇಶಪೂರ್ವಕ ಯೋಜನೆಯಾಗಿಯೋ ಅಥವಾ ಪಾರಂಪರಿಕ ಆಚರಣೆಯಾಗಿಯೋ ನಮ್ಮ ಇಡೀ ಜನಸಂಖ್ಯೆಯ ಮುಕ್ಕಾಲು ಭಾಗದಷ್ಟಿರುವ ಶೂದ್ರರು ಹಾಗೂ ಮಹಿಳೆಯರನ್ನು ಕೆಳಗಿರಿಸುವುದು ಹಾಗೂ ಹಕ್ಕನ್ನು ನೀಡದಿರುವುದು' ಎಂದು 1953ರಲ್ಲಿ ಲೋಹಿಯಾ ಬರೆದಿದ್ದರು.

ಗಾಂಧಿಯ ನಂತರ ಪುರುಷ–ಮಹಿಳೆ ಸಮಾನತೆ ವಿಚಾರಕ್ಕೆ ಹೆಚ್ಚು ಒತ್ತು ನೀಡಿದ ನೇತಾರರೆಂದರೆ ಬಹುಶಃ ಲೋಹಿಯಾ. ರಾಜಕಾರಣದಲ್ಲಿ ಮಾತ್ರವಲ್ಲ ಬದುಕಿನ ಎಲ್ಲಾ ರಂಗಗಳಲ್ಲೂ ಸಕ್ರಿಯ ಪಾತ್ರ ವಹಿಸಲು ಮಹಿಳೆಯರಿಗೆ ಅವರು ಯಾವಾಗಲೂ ಉತ್ತೇಜನ ನೀಡುತ್ತಿದ್ದರು. ಮಹಿಳೆಯರ ವಿಚಾರಗಳ ಬಗ್ಗೆ ಅವರಿಗೆ ಆಳವಾದ ಸಹಾನುಭೂತಿ ಇತ್ತು. ಸಾವಿತ್ರಿ, ದ್ರೌಪದಿ, ಸೀತೆ ಮುಂತಾದ ಭಾರತೀಯ ಪರಂಪರೆಯಲ್ಲಿ ಕಂಡು ಬರುವ ಸ್ತ್ರೀಯರ ಬಗ್ಗೆ ವಿಶ್ಲೇಷಣಾತ್ಮಕವಾದ ವಿಚಾರಗಳನ್ನು ಮಂಡಿಸಿ ಸಶಕ್ತ ಮಹಿಳಾ ಮಾದರಿಗಳನ್ನು ಸೃಷ್ಟಿಸುವ ಯತ್ನಗಳನ್ನೂ ಲೋಹಿಯಾ ತಮ್ಮ ಬರಹಗಳಲ್ಲಿ ಮಾಡಿದ್ದಾರೆ.

'ನಮ್ಮ ಸಮಾಜದಲ್ಲಿ ಹಾಸುಹೊಕ್ಕಾಗಿರುವ – ಜಾತಿ ಹಾಗೂ ಮಹಿಳೆ – ಈ ಎರಡು ಪ್ರತ್ಯೇಕತೆ ಅಥವಾ ಭೇದ ಭಾವ ಭಾರತೀಯರ ಚೈತನ್ಯದ ಉಡುಗುವಿಕೆಗೆ ಕಾರಣವಾಗಿದೆ. ಈ ಭೇದಭಾವಗಳು ಸಾಹಸ ಹಾಗೂ ಸಂತೋಷದ ಎಲ್ಲಾ ಸಾಮರ್ಥ್ಯಗಳನ್ನು ಕೊಲ್ಲುವ ಶಕ್ತಿ ಪಡೆದಿವೆ.' ಎಂದು ಲೋಹಿಯಾ ಹೇಳಿದ್ದರು.

ಭಾರತದ ಮಹಿಳೆ ಎರಡು ಬಗೆಯ ಅನಾನುಕೂಲತೆಗಳಿಂದ ನರಳುತ್ತಾಳೆ. ಒಂದು ಮಾಮೂಲಾದ, ಸಾರ್ವತ್ರಿಕವಾದ ಪುರುಷ ಪ್ರಾಧಾನ್ಯ. ಎರಡನೆಯದು ಹಾಗೂ ಬಹಳ ಮುಖ್ಯವಾದದ್ದು ಕೆಟ್ಟ ಜಾತಿ ವ್ಯವಸ್ಥೆ. ಭಾರತದ ಸಂದರ್ಭದಲ್ಲಿ ಪುರುಷರ ಜೊತೆ ಸಮಾನತೆ ಸಾಧಿಸಬೇಕೆಂದರೆ ಮಹಿಳೆಯರಿಗೆ ವಿಶೇಷ ಅವಕಾಶಗಳನ್ನು ಒದಗಿಸಿಕೊಡಬೇಕಾದುದು ಅಗತ್ಯ ಎಂದಿದ್ದರು ಅವರು.

ನಗರದ ಫೆಮಿನಿಸ್ಟರ ಕಾಳಜಿಗಳನ್ನು ಶ್ಲಾಘಿಸುತ್ತಾ ಬೆಂಬಲಿಸುತ್ತಲೇ, ಮಹಿಳೆಯರ ಸಮಸ್ಯೆಗಳು ವಿವಾಹ ಹಾಗೂ ಆಸ್ತಿ ಹಕ್ಕುಗಳಿಂದಾಚೆಗೂ ಪಸರಿಸಿಕೊಳ್ಳುತ್ತವೆ ಎಂದು ಲೋಹಿಯಾ ವಾದಿಸುತ್ತಿದ್ದರು. ಲೋಹಿಯಾ ಅವರ ಪ್ರಕಾರ, "ಬಹುತೇಕ ಭಾರತೀಯ ಮಹಿಳೆಯರ ದೊಡ್ಡ ಸಮಸ್ಯೆ ನೀರಿಗೆ ನಲ್ಲಿಗಳಿಲ್ಲದಿರುವುದು ಹಾಗೂ ಶೌಚಾಲಯಗಳ ಕೊರತೆ. ದೂರದ ಬಾವಿಗಳು ಅಥವಾ ಕೆರೆಗಳಿಂದ ಕೊಳಕಾದ ಕೆಸರಿನಿಂದ ತುಂಬಿದ ನೀರನ್ನು ದಿನಾ ಬೆಳಗ್ಗೆ ಹಾಗೂ ಸಂಜೆ ತರುವಂತಹ ಚಾಕರಿಗೆ ಭಾರತೀಯ ಮಹಿಳೆ ಸಿಕ್ಕಿಹಾಕಿಕೊಂಡಿದ್ದಾಳೆ. ಜೊತೆಗೆ, ಸೂರ್ಯೋದಯಕ್ಕೆ ಮುಂಚೆ ಅಥವಾ ಸೂರ್ಯಾಸ್ತದ ನಂತರ ಬಯಲುಗಳಲ್ಲಿ ವಿಸರ್ಜನೆ ಮೂಲಕ ತನ್ನ ಮಾನ ಕಾಪಾಡಿ ಕೊಳ್ಳಬೇಕು ಆಕೆ. ಹೊಗೆಯುಗುಳುವ ಒಲೆಯ ಜೊತೆ ಅಡುಗೆಮನೆ ಯಲ್ಲಿ ಆಕೆಯ ಜೀತ ಮತ್ತೂ ಹೇಯವಾದದ್ದು."

ಇಂತಹ ವಿಚಾರಗಳೇ ಮಹಿಳಾ ವಿಮೋಚನೆಗಾಗಿ ಲೋಹಿಯಾ ಹೋರಾಟಕ್ಕೆ ಕೇಂದ್ರಬಿಂದುವಾದವು. ಇದರ ಜೊತೆಗೇ ಮನೆಗಳಲ್ಲಿ ಹೆಣ್ಣುಮಕ್ಕಳಿಗೆ ಕಡಿಮೆ ಪೋಷಣೆ, ಹೆಣ್ಣುಮಕ್ಕಳಿಗೆ ಆಹಾರ ಹಂಚಿಕೆಯಲ್ಲಿ ವ್ಯತ್ಯಾಸ, ನಿರುದ್ಯೋಗ ಮತ್ತಿತರ ಅನ್ಯಾಯಗಳ ವಿರುದ್ಧದ ಹೋರಾಟ ದಲ್ಲಿ ಮಹಿಳೆಯರು ಪಾಲ್ಗೊಳ್ಳಬೇಕೆಂದು ಅವರು ಬಯಸಿದ್ದರು.

ಹೋರಾಟಗಳಲ್ಲಿ ಮಹಿಳೆಯರನ್ನು ತೊಡಗಿಸಿಕೊಳ್ಳದೇ ಭಾರಿ ಬದಲಾವಣೆಗಳ ವಿಚಾರಗಳನ್ನು ಕುರಿತು ಮಾತನಾಡುವುದು ಅವರಿಗೆ ಇಷ್ಟವಾಗುತ್ತಿರಲಿಲ್ಲ. ಅವರು ಒಮ್ಮೆ ಹೀಗೆ ಬರೆದಿದ್ದಾರೆ:

'ಒಂದು ದಿನ ಕಾಫಿ ಹೌಸ್ ನಲ್ಲಿ ಮಾತನಾಡುತ್ತಾ ಕುಳಿತಿದ್ದ ಜನರ ಗುಂಪಿನಲ್ಲಿ ನಾನೂ ಇದ್ದೆ. ಇಂತಹ 'ಕಾಫಿ ಟಾಕ್'ಗಳೇ ಫ್ರೆಂಚ್ ಕ್ರಾಂತಿ ಹುಟ್ಟು ಹಾಕಿದ್ದು ಎಂದಾಗ ನನಗೆ ತೀರಾ ಕೋಪ ಬಂತು. ಆ ಗುಂಪಿನಲ್ಲಿ ನಮ್ಮ ಜೊತೆ ಒಬ್ಬ ಶೂದ್ರ ಇರಲಿಲ್ಲ, ಒಬ್ಬ ಮಹಿಳೆ ಇರಲಿಲ್ಲ.'

"ಮಹಿಳೆ, ಹರಿಜನ, ಆದಿವಾಸಿ, ಹಿಂದುಳಿದ ವರ್ಗಗಳು, ಧಾರ್ಮಿಕ ಅಲ್ಪಸಂಖ್ಯಾತರು ಹಾಗೂ ಶೂದ್ರರು – ನಮ್ಮ ಸಮಾಜದ ಈ ಐದು ವರ್ಗಗಳು ನಮ್ಮ ಜನಸಂಖ್ಯೆಯ ಶೇ. 90ರಷ್ಟಿದ್ದಾರೆ. ನಮ್ಮ ಸಮಾಜದ ಈ ವರ್ಗಗಳಿಗೆ ವಿಶೇಷ ಅವಕಾಶ ನೀಡುವವರೆಗೆ ರಾಷ್ಟ್ರ ಪ್ರಗತಿ ಕಾಣುವುದು ಸಾಧ್ಯವಿಲ್ಲ. ಜನ ಅವಕಾಶಗಳ ಸಮಾನತೆಯನ್ನು ಕುರಿತು ಮಾತನಾಡುತ್ತಾರೆ. ಆದರೆ ನಾವು ವಿಶೇಷ ಅವಕಾಶಗಳ ತತ್ವವನ್ನು ಅನುಸರಿಸಬೇಕು. ಯು ಎಸ್ ಎಸ್ ಆರ್ ನಲ್ಲಿ (ಸೋವಿಯೆತ್ ರಷ್ಯಾದಲ್ಲಿ) ಝಾರ್ ದೊರೆ ವಿರುದ್ಧ ನಡೆದ ಕ್ರಾಂತಿ ನಮಗೆ ಗೊತ್ತಿದೆ. ಫ್ರೆಂಚ್ ಕ್ರಾಂತಿ ಗೊತ್ತು. ನಾವು ವಿಶೇಷ ಅವಕಾಶ ಒದಗಿಸುವ ತತ್ವವನ್ನು ಅನುಸರಿಸಬೇಕಿದೆ. ಸದ್ಯಕ್ಕೆ ದಕ್ಷತೆ ಹಾಗೂ ಅವಕಾಶಗಳು ಕೆಲವೇ ವ್ಯಕ್ತಿಗಳಿಗೆ ಸೀಮಿತವಾಗಿವೆ" ಎಂದು ಲೋಹಿಯಾ ಲೋಕಸಭೆಯಲ್ಲಿ ಹೇಳಿದ್ದರು.

1965ರ ಮಾರ್ಚ್ 12ರಂದು ಲೋಕಸಭೆ ಚರ್ಚೆಯಲ್ಲಿ ಪಾಲ್ಗೊಂಡಿದ್ದ ಲೋಹಿಯಾ ಅವರು ಪಂಚವಾರ್ಷಿಕ ಯೋಜನೆಗಳ ಅನುಷ್ಠಾನದ ರೀತಿ ನೀತಿ ಬಗ್ಗೆ ಟೀಕೆಗಳನ್ನು ಮಾಡುತ್ತಾರೆ. ಈ ದೈತ್ಯ ಅಸಂಬದ್ಧ ಪಂಚ ವಾರ್ಷಿಕ ಯೋಜನೆಗಳು ಶ್ರೀಮಂತರನ್ನು ಮತ್ತಷ್ಟು ಶ್ರೀಮಂತ ಮಾಡುತ್ತಿವೆ. ತುಳಿತಕ್ಕೊಳಗಾದವರಿಗೆ ಯಾವುದೇ ಪರಿಹಾರ ಸಿಗುವುದಿಲ್ಲ ಎಂದು ಲೋಹಿಯಾ ಹೇಳಿದ್ದರು.

"ಇಂತಹ ಸನ್ನಿವೇಶದಲ್ಲಿ, ವಿಸ್ತೃತ ದೃಷ್ಟಿಕೋನ ಹೊಂದಲು ಇಡೀ ಸಮಾಜಕ್ಕೆ ನಾನು ಮನವಿ ಸಲ್ಲಿಸಲು ಬಯಸುತ್ತೇನೆ. ನಮ್ಮ ಜನಸಂಖ್ಯೆ 48 ಕೋಟಿ ಇದೆ. ಇವರಲ್ಲಿ 7–8 ಕೋಟಿ ಹರಿಜನರಿದ್ದಾರೆ. ಒಟ್ಟಾಗಿ 43 ಕೋಟಿ ಹಿಂದುಳಿದ ಜನರಿದ್ದಾರೆ. ಎಲ್ಲಾ ಮಹಿಳೆಯರನ್ನೂ ಅವರು ಯಾವುದೇ ಜಾತಿಗೆ ಸೇರಿರಲಿ ಅವರನ್ನು ನಾನು ಹಿಂದುಳಿದವರೆಂದು ಪರಿಗಣಿಸುತ್ತೇನೆ. ರಾಷ್ಟ್ರದಲ್ಲಿ 43 ಕೋಟಿ ಹಿಂದುಳಿದ ಪುರುಷರು ಮತ್ತು ಮಹಿಳೆಯರು ಇದ್ದಾರೆ. ಮತ್ತೆ ಮೇಲ್ಜಾತಿಗಳಲ್ಲಿ ಬಡ ಜನರೂ ಇದ್ದಾರೆ. ಅವರ ಸಂಖ್ಯೆ ಸುಮಾರು ನಾಲ್ಕೂವರೆ ಕೋಟಿ. ಹೀಗಾಗಿ ನಿಜವಾದ ಅರ್ಥದಲ್ಲಿ ಸುಮಾರು 50 ಲಕ್ಷ ಜನ ಮಾತ್ರ ಶ್ರೀಮಂತರು ಮತ್ತು ಅವರಲ್ಲಿ ಬಹುತೇಕರು ಮೇಲ್ಜಾತಿಗಳಿಗೆ ಸೇರಿದವರು. ಈ ಸದ್ಯದ ಸಾಮಾಜಿಕ ವ್ಯವಸ್ಥೆಯ ದೋಷವನ್ನು ನಾವು ಅರ್ಥ ಮಾಡಿಕೊಳ್ಳಲು ಯತ್ನಿಸಬೇಕು. ಮೇಲ್ಜಾತಿಗಳಿಗೆ ಸೇರಿದ ನಾಲ್ಕೂವರೆ ಕೋಟಿ ಬಡ ಜನರು ತಮ್ಮದೇ ಜಾತಿಯ ಜನರ ಜೊತೆ ಬೆರೆಯುತ್ತಾ

ಅವರದೇ ಮಾರ್ಗದರ್ಶನಗಳಲ್ಲಿ ಮುಂದುವರಿದರೆ ಯಾವುದೇ ಸುಧಾರಣೆ ಸಾಧ್ಯವಾಗದು. ಈ ನಾಲ್ಕೂವರೆ ಕೋಟಿ ಜನ ತಮ್ಮ ಜಾತಿಗಳಲ್ಲಿನ ಶ್ರೀಮಂತರ ಜೊತೆಗಿನ ಸಂಪರ್ಕ ಕಡಿದುಕೊಂಡು 43 ಕೋಟಿ ಹಿಂದುಳಿದ ಜನರ ಜೊತೆ ಸೇರಿಕೊಳ್ಳದಿದ್ದಲ್ಲಿ ಹೆಚ್ಚಿನದೇನೂ ಸಾಧಿಸಲಾಗದು. 43 ಕೋಟಿ ಹಿಂದುಳಿದ ಜನರು ಹಾಗೂ ಮೇಲ್ಜಾತಿಗಳಲ್ಲಿನ ನಾಲ್ಕೂವರೆ ಕೋಟಿ ಬಡ ಜನರು ಕೈಜೋಡಿಸಿದಲ್ಲಿ ಅವರು ಭಾರಿ ಶಕ್ತಿಯಾಗಿ ಉದಯವಾಗುತ್ತಾರೆ. 50 ಲಕ್ಷ ಜನ ಶ್ರೀಮಂತರ ಅರಮನೆಯಂತಹ ಭವ್ಯ ಕೋಟೆಗಳನ್ನು ಸ್ಫೋಟಿಸಿ ಬೂದಿಯಾಗಿಸುತ್ತಾರೆ. ಹಾಗಾದಾಗ ಮಾತ್ರ ಆಧುನಿಕ ಭಾರತದ ಕಟ್ಟಡ ಕಟ್ಟಬಹುದು. ಬೇರೆ ಪರ್ಯಾಯ ಮಾರ್ಗವಿಲ್ಲ" ಎಂದಿದ್ದರು.

ಆದರೆ ಈಗ ವಿಜೃಂಭಿಸುತ್ತಿರುವುದು ಬೇರೆಯದೇ ಬಗೆಯ ಜಾತಿ ರಾಜಕಾರಣ. ಚುನಾವಣೆ, ಆಡಳಿತ, ರಾಜಕೀಯಗಳಲ್ಲಿ ಕಂಡು ಬರುವ ಜಾತಿ ರಾಜಕಾರಣದ ಸಮೀಕರಣಗಳು ಅಧಿಕಾರ ರಾಜಕಾರಣಕ್ಕೆ ಪೂರಕವಾಗುತ್ತಿವೆ ಅಷ್ಟೆ.

ಲೋಹಿಯಾ ಅವರು ಇನ್ನೂ ಒಂದು ಮಾತು ಹೇಳುತ್ತಾರೆ: "ಸಾಮುದಾಯಿಕ ಪ್ರಯತ್ನಗಳಿಂದ ಇಡೀ ರಾಷ್ಟ್ರ ಪ್ರಗತಿ ಸಾಧಿಸಿ ಸಮೃದ್ಧತೆ ಸಾಧಿಸಬಲ್ಲುದು ಎಂಬುದನ್ನು ಜನ ನಂಬಲು ಬಯಸುವುದಿಲ್ಲ. ರಾಷ್ಟ್ರೀಯ ಸಂಪತ್ತಿನಲ್ಲಿ ತಮ್ಮ ಪಾಲು ಹೆಚ್ಚಿಸಿಕೊಳ್ಳಲು ಯತ್ನಿಸುವ ಬಗ್ಗೆಯೇ ಎಲ್ಲರೂ ಬಿಝಿಯಾಗಿದ್ದಾರೆ". ಈ ಟೀಕೆ ಬಹುಶಃ ಈಗಲೂ ಪ್ರಸ್ತುತ.

ಹೆಣ್ಣು ಶಿಶುಹತ್ಯೆ ಅಥವಾ ತಂತ್ರಜ್ಞಾನದ ಬೆಳವಣಿಗೆಯಿಂದ ತಾಯಿಯ ಗರ್ಭದಲ್ಲಿರುವ ಹೆಣ್ಣು ಭ್ರೂಣವನ್ನೇ ಹತ್ಯೆ ಮಾಡಿ ಹೆಣ್ಣುಮಗುವಿಗೆ ಹುಟ್ಟುವ ಹಕ್ಕನ್ನೇ ನಿರಾಕರಿಸಿರುವ ಕಾಲ ಇದು. ಲೋಹಿಯಾ ಅವರು ಲೋಕಸಭೆಯಲ್ಲಿ ಹೆಣ್ಣು ಶಿಶು ಹತ್ಯೆಯ ಪಿಡುಗಿನ ಬಗ್ಗೆ 1964ರಲ್ಲೇ ಎಚ್ಚರಿಸಿರುವುದು ವಿಶೇಷ.

1964ರ ಮಾರ್ಚ್ 17ರಂದು ವಾರ್ತಾ ಮತ್ತು ಪ್ರಸಾರ ಸಚಿವಾಲಯದ ಅನುದಾನದ ಬೇಡಿಕೆಗಳ ಕುರಿತು ಲೋಕಸಭೆಯಲ್ಲಿ ಚರ್ಚೆಯಲ್ಲಿ ಪಾಲ್ಗೊಂಡಿದ್ದ ಲೋಹಿಯಾ ಅವರು ಒಂದು ವಿಚಾರವನ್ನು ವಾರ್ತಾ ಮತ್ತು ಪ್ರಸಾರ ಖಾತೆ ಸಚಿವರ ಗಮನಕ್ಕೆ ತರಲು ಬಯಸುವುದಾಗಿ ವಿಷಯ ಪ್ರಸ್ತಾಪಿಸುತ್ತಾರೆ.

ಲೋಹಿಯಾ ಹೀಗೆ ಹೇಳಿದ್ದಾರೆ: "ಅವರ ರಾಜ್ಯದಿಂದಲೇ ನನಗೊಂದು ಪತ್ರ ಬಂದಿದೆ. ಇದರಲ್ಲಿ ಬಹಳಷ್ಟು ಭಾವನಾತ್ಮಕ ಸ್ಪರ್ಶ ಇದೆ. ಬಿಹಾರ ಹಾಗೂ ಅಷ್ಟೇ ಏಕೆ, ನಾನಂದು ಕೊಂಡಂತೆ ರಾಷ್ಟ್ರದ ಇತರ ಹಲವು ರಾಜ್ಯಗಳಲ್ಲೂ ಈ ಕಾಲದಲ್ಲೂ ಹೆಣ್ಣು ಮಗುವನ್ನು ಮುಗಿಸಿಬಿಡಲಾಗುತ್ತದೆ ಎಂಬ ವಿಚಾರವನ್ನು ಶ್ರೀ ಸತ್ಯನಾರಾಣಸಿನ್ಹಾ ಅವರ ಗಮನಕ್ಕೆ ತರಬೇಕೆಂಬ ಮನವಿಯನ್ನು ಈ ಪತ್ರದ ಲೇಖಕರು ನನಗೆ ಮಾಡಿದ್ದಾರೆ. ರಾಷ್ಟ್ರದ ಹಲವು ಕುಟುಂಬಗಳು ಹಾಗೂ ಜಾತಿಗಳು ಹೆಣ್ಣುಮಗುವನ್ನು ಹುಟ್ಟಿದಾಕ್ಷಣ ಕೊಂದು ಬಿಡುವುದೇ ಬುದ್ಧಿವಂತಿಕೆ ಎಂದು ಭಾವಿಸುತ್ತವೆ. ರಾಷ್ಟ್ರದಲ್ಲಿ ಹೆಣ್ಣುಮಗುವಿನ ಹತ್ಯೆ ಹೀಗೇ ಮುಂದುವರಿದದ್ದೇ ಆದಲ್ಲಿ ನ್ಯಾಯ ಸಿಗುತ್ತದೆ ಎಂದು ನನಗನಿಸುವುದಿಲ್ಲ. ಈ ಪತ್ರದ ಲೇಖಕರು ಈ ಪತ್ರವನ್ನು ಶ್ರೀ ಸತ್ಯನಾರಾಯಣ್ ಅವರಿಗೆ ಓದಿ ಹೇಳಿ ಎಂದೂ ಮನವಿ ಮಾಡಿದ್ದಾರೆ."

ಸಮಾಜದಲ್ಲಿ ಈ ಬಗೆಯ ಅನಿಷ್ಟಗಳನ್ನು ನಿವಾರಿಸಲು ನೆರವಾಗುವಂತಹ ಆಸಕ್ತಿದಾಯಕ ಹಾಗೂ ಆಕರ್ಷಕವಾದ ಕಾರ್ಯಕ್ರಮಗಳನ್ನು



ಎ ಐ ಆರ್ ಅಥವಾ ವಾರ್ತಾ ಮತ್ತು ಪ್ರಸಾರ ಸಚಿವಾಲಯದ ಮೂಲಕ ಪ್ರಸಾರ ಮಾಡಲಾಗುತ್ತಿಲ್ಲ. ಇಂತಹ ವಿಚಾರಗಳನ್ನು ಆಸಕ್ತಿದಾಯಕ ಕಾರ್ಯಕ್ರಮಗಳ ಮೂಲಕ ಪ್ರಸಾರ ಮಾಡಿ ಜನರ ಆಚಾರವಿಚಾರಗಳನ್ನು ಬದಲಿಸಲು ಯತ್ನಿಸಿದಲ್ಲಿ, ಈ ದಿಸೆಯಲ್ಲಿ ನಮ್ಮ ರಾಷ್ಟ್ರ ಒಂದಷ್ಟು ನಾಗರಿಕವಾಗುವುದು ಸಾಧ್ಯ ಎಂದಿದ್ದರು ಲೋಹಿಯಾ.

ಇದೇ ಚರ್ಚೆಯಲ್ಲಿ ಲೋಹಿಯಾ ಮತ್ತೂ ಒಂದು ವಿಚಾರವನ್ನು ಪ್ರಸ್ತಾಪಿಸಿದ್ದರು.. "ಪುರುಷ, ಮಹಿಳೆ ಹಾಗೂ ಮಕ್ಕಳು ವಿಷಯವನ್ನು ಚರ್ಚೆಗಾಗಿ ನಾನು ಒಮ್ಮೆ ತೆಗೆದುಕೊಂಡಿದ್ದೆ. ಆದರೆ ಮುಗಿಸುವುದು ಸಾಧ್ಯವಾಗಲಿಲ್ಲ. ಸದ್ಯದ ರಾಜಕೀಯಕ್ಕೆ ಇದು ಸಂಬಂಧಿಸದ ವಿಷಯ. ಆದರೆ ಸ್ಪೀಕರ್ ಸರ್, ನಮ್ಮ 1500 ವರ್ಷಗಳ ರಾಜಕೀಯ ಹಾಗೂ ಸಾಮಾಜಿಕ ಇತಿಹಾಸದುದ್ದಕ್ಕೂ ನಮ್ಮ ಮಹಿಳೆಯರು ಎಷ್ಟೊಂದು ನರಳಿದ್ದಾರೆ ಎಂಬುದು ನಿಮಗೆ ಗೊತ್ತೆ?" ಎಂಬಂತಹ ಪ್ರಶ್ನೆಯನ್ನೂ ಕೇಳಿದ್ದರು ಅವರು.

ಈ ಮುಂಚೆ, ಈ ವಿಚಾರದ ಬಗ್ಗೆ ನನಗೆ ಸಿಟ್ಟು ಬರುತ್ತಿತ್ತು. 8ರಿಂದ 10 ವರ್ಷಗಳ ಕಾಲ ಈ ವಿಚಾರದಿಂದ ನನಗೆ ಅಸಹನೆ ಆಗುತ್ತಿತ್ತು. ಆ ಸಂದರ್ಭದಲ್ಲಿ ಈ ಸಮಸ್ಯೆಯ ಮೂಲ ಯಾವುದು ಎಂಬುದು ನನಗೆ ಅರ್ಥವಾಗಿರಲಿಲ್ಲ. ಆದರೆ ಆ ಬಗ್ಗೆ ಆಳವಾಗಿ ಯೋಚಿಸಿದಾಗ ಈ ನಿರ್ಧಾರಕ್ಕೆ ಬಂದೆ. ಇಡೀ ದಿನ ಬಾಸ್ ಕಿರುಕುಳಕ್ಕೆ ಸಿಲುಕುವ ಭಾರತೀಯ ಪುರುಷ, ಮನೆಗೆ ಹಿಂತಿರುಗಿದಾಗ ಮಹಿಳೆಯನ್ನು ಕೆಟ್ಟದಾಗಿ ನಡೆಸಿಕೊಳ್ಳುವ ಮೂಲಕ ತನ್ನ ಆಕ್ರೋಶ, ಹತಾಶೆಗೆ ದನಿ

ಕೊಡುತ್ತಾನೆ. ಪುರುಷರ ಕಿರುಕುಳಕ್ಕೆ ಸಿಲುಕುವ ಮಹಿಳೆಯರು ಮುಗ್ಧ ಮಕ್ಕಳ ಮೇಲೆ ತಮ್ಮ ಆಕ್ರೋಶ ಹಾಗೂ ಕೋಪತಾಪ ತೋರಿಸುತ್ತಾರೆ.

ಕೆಲವೊಮ್ಮೆ ನನಗೆ ರಾಜಕೀಯ ತೊರೆದು ಮಕ್ಕಳ ಪಾರ್ಟಿ ಮಾಡಬೇಕು ಎಂದು ಬಲವಾಗಿ ಅನಿಸುತ್ತದೆ. ಆ ಮೂಲಕ ಯಾವುದೇ ಕಾರಣವಿಲ್ಲದೆ ಮಕ್ಕಳನ್ನು ಹೊಡೆದು ಬಡಿದು ಮಾಡುವ ತಂದೆ ತಾಯಿಗಳ ವಿರುದ್ಧ ಹೋರಾಟ ಮಾಡಬೇಕು ಎನಿಸುತ್ತದೆ. ತನ್ನ ಆಕ್ರೋಶ ಅಥವಾ ಅಸಹಾಯಕತೆ ಹೊರಹಾಕಲು ದುರ್ಬಲರ ಮೇಲೆ ಆಕ್ರಮಣ ಮಾಡುವ ಪ್ರವೃತ್ತಿಯನ್ನು ಶಕ್ತಿವಂತರು ತಡೆಹಿಡಿಯಬೇಕು ಎಂಬಂತಹ ವಿಚಾರವನ್ನು ಜನರ ಮನಸ್ಸಲ್ಲಿ ಮೂಡಿಸಲು ಹಾಗೂ ಪ್ರಸಾರ ಮಾಡಲು ತನ್ನಲ್ಲಿ ಇರುವ ಎಲ್ಲಾ ಅವಕಾಶಗಳನ್ನು ವಾರ್ತಾ ಮತ್ತು ಪ್ರಸಾರ ಸಚಿವಾಲಯ ಬಳಸಿಕೊಳ್ಳಬೇಕು. ಈ ನಕಾರಾತ್ಮಕ ಮಾನವೀಯ ಪ್ರವೃತ್ತಿಯನ್ನು ನಿಯಂತ್ರಿಸಲು ಎಲ್ಲಾ ಪ್ರಯತ್ನಗಳನ್ನು ಮಾಡಬೇಕು. ದೀರ್ಘಾವಧಿ ಯೋಜನೆಯನ್ನು ರೂಪಿಸಬೇಕು. ಆದರೆ ಈ ಉದ್ದೇಶ ಸಾಧನೆಗೆ ಸರ್ಕಾರ ಹಾಗೂ ವಾರ್ತಾ ಮತ್ತು ಪ್ರಸಾರ ಸಚಿವಾಲಯವೇ ಇಂತಹ ಭಾವನೆಗಳಿಂದ ಮೊದಲು ಮುಕ್ತರಾಗಬೇಕು. ಈ ಪ್ರಕ್ರಿಯೆಯಲ್ಲಿ ಅವರು ಹೆಚ್ಚು ನಾಗರಿಕ ಹಾಗೂ ಸಭ್ಯರಾಗಬೇಕು. ಎಂದೂ ಅವರು ಹೇಳುತ್ತಾರೆ.

ರಕ್ಷಣಾ ಸಚಿವಾಲಯಕ್ಕೆ ಅನುದಾನ ಬೇಡಿಕೆಗಳ ಕುರಿತಂತೆ ಲೋಕಸಭೆಯಲ್ಲಿ 1964ರ 21ನೇ ಮಾರ್ಚ್‌ನಲ್ಲಿ ನಡೆದ ಚರ್ಚೆಯಲ್ಲಿ ಲೋಹಿಯಾ ಅವರು ಮಹಿಳೆಯ ವಿಚಾರ ಪ್ರಸ್ತಾಪಿಸುತ್ತಾರೆ. "ಭಾರತೀಯ ಸ್ತ್ರೀತ್ವದ ಆದರ್ಶ ಎಂದು ಈಗಲೂ ಪದ್ಮಿನಿಯನ್ನು ನೋಡುತ್ತಾರೆ ನಮ್ಮ ಜನ. ಆದರೆ ಈ ಯುಗದಲ್ಲಿ ನನ್ನ ಆದರ್ಶ ಯಾರು ಎಂದು ನನ್ನನ್ನು ಕೇಳಿದರೆ ನಾನು ನಿಜವಾಗಿ ರಷ್ಯಾದ ನಟಾಲಿ ಎಂದು ಹೇಳುತ್ತೇನೆ. ಉಕ್ರೇನ್ ನ ಜರ್ಮನ್ ಸಶಸ್ತ್ರ ಪಡೆಗಳ ಶಿಬಿರದಲ್ಲಿ ಮೇಡ್ ಸರ್ವೆಂಟ್ (ಕೆಲಸದಾಕೆ) ವೇಷದಲ್ಲಿ ರಹಸ್ಯ ಮಾಹಿತಿಗಳನ್ನು ಸಂಗ್ರಹಿಸಿದಳು. ಆ ಮಾಹಿತಿ ಆಧಾರದ ಮೇಲೆ 50,000 ಜರ್ಮನ್ ಸೇನಾ ಸಿಬ್ಬಂದಿ ಹತ್ಯೆಯಾದರು. ನಮ್ಮ ಆದರ್ಶಗಳನ್ನು ನಾವು ಬದಲಿಸಿಕೊಳ್ಳಬೇಕಿದೆ" ಎನ್ನುತ್ತಾರೆ ಲೋಹಿಯಾ. ಇದೇ ಸಂದರ್ಭದಲ್ಲಿ ಮುಲಾಯಂ ಸಿಂಗ್ ಯಾದವ್ ಅವರ ಮಾತು ನನಗೆ ನೆನಪಿಗೆ ಬರುತ್ತದೆ. ಮೀಸಲು ಮಸೂದೆ ವಿಚಾರವಾಗಿ ಮಾತನಾಡುತ್ತಾ ಮುಲಾಯಂ ಅವರು "ಸಂಸತ್‌ನಲ್ಲಿ ಅಷ್ಟೊಂದು ಸಂಖ್ಯೆಯ ಮಹಿಳೆಯರು ಆಯ್ಕೆಯಾಗಿ ಬಂದರೆ ರಾಷ್ಟ್ರ ಸುರಕ್ಷಿತವಾಗಿರುತ್ತದೆಯೆ?" ಎಂದು ಪ್ರಶ್ನಿಸಿದ್ದರು.

ಮುಲಾಯಂ ಸಿಂಗ್ ಯಾದವ್ ಅವರಿಗೆ 1967ರಲ್ಲಿ ಜಸವಂತ್ ನಗರದಿಂದ ಸ್ಪರ್ಧಿಸಲು ಮೊದಲ ಬಾರಿಗೆ ಟಿಕೆಟ್ ನೀಡಿದ್ದವರೇ ಲೋಹಿಯಾ. ಈಗ ಕಾಂಗ್ರೆಸ್ ಜೊತೆಗಿನ ಅವರ ಅವಕಾಶವಾದಿ ಸಂಬಂಧವನ್ನು ಲೋಹಿಯಾ ಜೀವಂತವಾಗಿ ಇದ್ದಿದ್ದರೆ ಒಪ್ಪುತ್ತಿದ್ದರೊ ಇಲ್ಲವೊ. ಜೊತೆಗೆ ಮಹಿಳಾ ಮಸೂದೆ ಬಗ್ಗೆ ಅವರು ವಿರೋಧಿಸುವ ರೀತಿ ನೀತಿ ಬಗ್ಗೆಯೂ ಲೋಹಿಯಾ ಟೀಕಿಸಿರುತ್ತಿದ್ದರೇನೊ. ಲೋಹಿಯಾ ಪರಂಪರೆಯಲ್ಲಿ ಬಂದವರು ಊಳಿಗಮಾನ್ಯ ರೀತಿಯ, ಪುರುಷ ಪ್ರಧಾನ ಮನಸ್ಥಿತಿಯನ್ನು ಬಿಂಬಿಸುವಂತಹ ರೀತಿಯಲ್ಲಿ ಹೇಳಿಕೆಗಳನ್ನು ನೀಡುತ್ತಿರುವ ವಿಪರ್ಯಾಸವನ್ನು ನಾವಿಂದು ಕಾಣುತ್ತಿದ್ದೇವೆ.

ಪುರುಷ ಹಾಗೂ ಮಹಿಳೆ ಸಮಾನತೆ ಕುರಿತಂತೆ ಮಾತನಾಡುತ್ತಾ, ಲೋಹಿಯಾ ಅವರು ಒಮ್ಮೆ ಹೀಗೆ ಹೇಳಿದ್ದರು: ಮಹಿಳೆಯರನ್ನು ಕುರಿತು ಸಂಬೋಧಿಸುವಾಗ ಬಳಕೆಯಾಗುವ ಶ್ರೀಮತಿ ಪದವನ್ನು ಕಿತ್ತು ಹಾಕಬೇಕು. ಪ್ರತಿ ವ್ಯಕ್ತಿ ಪುರುಷ ಅಥವಾ ಮಹಿಳೆ, ಹುಡುಗ ಅಥವಾ ಹುಡುಗಿಯನ್ನು 'ಶ್ರೀ' ಎಂದೇ ಸಂಬೋಧಿಸಬೇಕು. (1965, ನವೆಂಬರ್ 16, ಲೋಕಸಭಾ ಚರ್ಚೆ).

ಪಾರಂಪರಿಕವಾದ ಅಸಮಾನ ಸಮಾಜದಲ್ಲಿ ಎಲ್ಲರಿಗೂ ಸಮಾನ ಅವಕಾಶ ಕೊಡುವ ಮೂಲಕ ಸಮಾನತೆಯನ್ನು ಸಾಧಿಸುವುದು ಸಾಧ್ಯವಿಲ್ಲ. ಮುಂದುವರಿದವರ ಸಮಾನಕ್ಕೆ ತರಲು ಹಿಂದುಳಿದ ವರ್ಗಗಳು, ಮಹಿಳೆ, ಹರಿಜನ, ಆದಿವಾಸಿ ಹಾಗೂ ಧಾರ್ಮಿಕ ಅಲ್ಪಸಂಖ್ಯಾತರಲ್ಲಿ ದಮನಕ್ಕೊಳಗಾದವರಿಗೆ ವಿಶೇಷ ಅವಕಾಶಗಳನ್ನು ನೀಡಬೇಕು. ಶೇ. 60ರಷ್ಟು ಮೀಸಲಿನ ಯೋಜನೆ ಜಾರಿಗೆ ಬರಬೇಕು ಎಂದು ಲೋಹಿಯಾ ಬಯಸಿದ್ದರು. ಇದು ಹಿಂದುಳಿದಿರುವಿಕೆಯನ್ನು ಹಾಗೇ ಮುಂದುವರಿಸುವುದಕ್ಕಲ್ಲ, ಆದರೆ ಅಂತ್ಯಗೊಳಿಸುವುದಕ್ಕೆ ಇದು ಅವಶ್ಯ ಎಂಬುದು ಲೋಹಿಯಾ ನಂಬಿಕೆ ಆಗಿತ್ತು. ಕ್ರಾಂತಿಕಾರಿ ಬದಲಾವಣೆಯ ಸಂಪೂರ್ಣ ಕಾರ್ಯಕ್ರಮಕ್ಕೆ, 'ಮೀಸಲು' ಎಂಬುದು ಬರೀ ಒಂದು ವಿಚಾರ. ಅದು ಮತ ಗಳಿಕೆಯ ಸಾಧನವಲ್ಲ ಎಂಬುದು ಲೋಹಿಯಾ ಚಿಂತನೆಯಾಗಿದ್ದುದನ್ನು ನಾವು ಮರೆಯಬಾರದು.

ಲೋಹಿಯಾ ಅವರ ಕೆಲವು ಚಿಂತನೆಗಳು ಯುಟೋಪಿಯನ್ ಎಂದು ಕೆಲವರು ಹೇಳುತ್ತಾರೆ. ಆದರೆ ಎಲ್ಲಾ ವಿಷನರಿಗಳು ಅಥವಾ ದಾರ್ಶನಿಕರು, ದೊಡ್ಡ ಕ್ರಾಂತಿಕಾರಿಗಳಲ್ಲಿ ಒಂದಷ್ಟು ಈ ಬಗೆಯ ಆದರ್ಶವಾದಿ ಯುಟೋಪಿಯನ್ ಆದಂತಹ ವಿಚಾರಗಳು ಇದ್ದೇ ಇರುತ್ತವೆ. ಅಂತಹದೊಂದು ದರ್ಶನವಿಲ್ಲದೆ ದೊಡ್ಡ ದೊಡ್ಡ ಕಾರಣಗಳಿಗಾಗಿ ಅಥವಾ ವಿಚಾರಗಳಿಗಾಗಿ ತ್ಯಾಗಗಳನ್ನು ಮಾಡಲು ಸ್ಫೂರ್ತಿ ಒದಗಿಸುವುದು ಸಾಧ್ಯವಿಲ್ಲ. ರಾಜಕೀಯವಾಗಿ ಲೋಹಿಯಾ ಅವರದು ವಿಮರ್ಶಾತ್ಮಕವಾದಂತಹ ದೂರದೃಷ್ಟಿ.

ರಾಷ್ಟ್ರದ ಹಲವು ಸಮಸ್ಯೆಗಳಿಗೆ ಉತ್ತರಗಳು ಈಗಲೂ ಅವರ ಚಿಂತನೆಗಳಲ್ಲಿವೆ. ರಾಜಕಾರಣ, ಅರ್ಥಶಾಸ್ತ್ರ, ಇತಿಹಾಸ, ಸಂಸ್ಕೃತಿ ಹಾಗೂ ಸಾಮಾಜಿಕ ಸಮಸ್ಯೆಗಳ ಕುರಿತಂತೆ ಲೋಹಿಯಾರ ಚಿಂತನೆಗಳಲ್ಲಿನ ಪ್ರಸ್ತುತತೆ ಮುಂದುವರಿಯುತ್ತಲೇ ಇರುತ್ತದೆ. ಆಧುನಿಕ ಭಾರತಕ್ಕೆ ಗಾಂಧಿ ನಂತರದಲ್ಲಿ ಲೋಹಿಯಾರ ಕೊಡುಗೆ ಬಹು ಮುಖ್ಯವಾದುದು ಎಂಬುದನ್ನು ನಾವು ಮರೆಯುವ ಹಾಗಿಲ್ಲ. ಸ್ವಾತಂತ್ರ್ಯ ಹೋರಾಟ ಕಾಲದಲ್ಲೇ ಅವರು ನಾಳಿನ ಭಾರತದ ನಾಯಕರಾಗಿದ್ದರು.

ಸಾಮಾಜಿಕ ನ್ಯಾಯ ಎಂಬುದು ಈಗ ದೊಡ್ಡ ಘೋಷಣೆ ಆಗಿದೆ. ಆದರೆ ಈ ವಿಚಾರಗಳನ್ನು ಸುಮಾರು 4–5 ದಶಕಗಳ ಹಿಂದೆಯೇ ಲೋಹಿಯಾ ಮಾತನಾಡಿದ್ದರು. ಆಗ ಈ ಮಾತುಗಳನ್ನಾಡುವುದು ಕಷ್ಟವೂ ಇತ್ತು. ಆದರೆ ಲೋಹಿಯಾ, ಅವರ ಕಾಲಕ್ಕಿಂತ ಮುಂದೆ ಹೋಗಿ ಚಿಂತಿಸಿದ ನೇತಾರ. ಹೀಗಾಗಿಯೇ ಅವರ ಸಾವಿಗಿಂತ ಕೆಲಕಾಲ ಮುಂಚೆ ಲೋಹಿಯಾ ಹೀಗೆ ನುಡಿದಿದ್ದರು: "ಜನರು ಬಹುಶಃ ನಾನು ಸತ್ತ ನಂತರ ನನ್ನ ಮಾತುಗಳನ್ನು ಕೇಳಿಸಿಕೊಳ್ಳುತ್ತಾರೆ." ಈಗ ಒಂದಿಲ್ಲೊಂದು ವಿಧದಲ್ಲಿ ಅವರ ಚಿಂತನೆಗಳ ಬಿಂಬಗಳನ್ನು ನಾವು ಅಲ್ಲಲ್ಲಿ ಕಾಣುತ್ತಲಂತೂ ಇದ್ದೇವೆ.

❑

(2010 ಮೇ 2 ರಂದು ಬೆಂಗಳೂರಿನಲ್ಲಿ ಡಾ. ರಾಮಮನೋಹರ ಲೋಹಿಯಾ ಜನ್ಮ ಶತಮಾನೋತ್ಸವ ಆಚರಣೆ ಅಂಗವಾಗಿ, 'ಲೋಹಿಯಾ ಚಿಂತನೆ ಮತ್ತು ಹೋರಾಟ' ಕುರಿತು ಡಾ ಯು ಆರ್ ಅನಂತಮೂರ್ತಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಮಂಡಿಸಲಾದ ವಿಚಾರಗಳು)



# ವಯಸ್ಕರ ಶಿಕ್ಷಣ ಕ್ಷೇತ್ರದ ರೂವಾರಿ: ಕುಲ್ ಸಮ್ ಸಯಾನಿ

ಕುಲ್‌ಸಮ್ ಸಯಾನಿ ಎಂಬ ಮಹಿಳೆಯ ಹೆಸರು ಭಾರತದ ಇತಿಹಾಸದಲ್ಲಿ ಬಹಳಷ್ಟು ಜನರಿಗೆ ಚಿರಪರಿಚಿತವಲ್ಲ. ಆದರೆ ವಯಸ್ಕರ ಶಿಕ್ಷಣ ಕ್ರಾಂತಿಯಲ್ಲಿ ಆಕೆಯ ಹೆಸರು ದಾಖಲಾರ್ಹವಾದುದು. ಈ ಕ್ಷೇತ್ರದಲ್ಲಿ ಎಲೆಮರೆಯ ಕಾಯಿಯಂತೆ ದುಡಿದ ಮಹಿಳೆ ಈಕೆ. 1900ರಲ್ಲಿ ಜನಿಸಿದ ಸಯಾನಿ ಮಹಾತ್ಮಗಾಂಧೀಜಿಯವರಿಂದ ಪ್ರಭಾವಿತಳಾದ ಮಹಿಳೆ, ಆಕೆಯ ತಂದೆ ಗಾಂಧೀಜಿಯವರ ವೈದ್ಯಕೀಯ ಸಲಹೆಗಾರರಾಗಿದ್ದರು.

ಗಾಂಧೀಜಿಯವರ ಒಡನಾಟ, ಅವರೊಂದಿಗೆ ನಡೆಸುತ್ತಿದ್ದ ಚರ್ಚೆ ಹಾಗೂ ತಮ್ಮ ಕುಟುಂಬದಲ್ಲಿ ವಿದ್ಯಾಭ್ಯಾಸಕ್ಕೆ ನೀಡಿದ್ದ ಮಹತ್ವದ ಪರಿಣಾಮದಿಂದಾಗಿ ಸಯಾನಿ, ಭಾರತದಲ್ಲಿ ಅನಕ್ಷರತೆಯನ್ನು ತೊಡೆದು ಹಾಕಲೇಬೇಕೆಂಬ ಮಹತ್ವವಾದ ಮನೋನಿರ್ಧಾರವನ್ನು ತೆಗೆದುಕೊಂಡರು. 1938ರಲ್ಲಿ ಕೇವಲ 100 ರೂ. ಬಂಡವಾಳದಿಂದ ಇಬ್ಬರು ಶಿಕ್ಷಕರನ್ನು ನೇಮಕ ಮಾಡಿಕೊಂಡರು. ಆದರೆ ವಿದ್ಯೆ ಕಲಿಯುವ ವಿದ್ಯಾರ್ಥಿನಿಯರನ್ನು ಹುಡುಕುವುದೆ ಕಷ್ಟದ ಕೆಲಸವಾಗಿತ್ತು. ಸಯಾನಿ ಬಡ ಮುಸ್ಲಿಂ ಬಡಾವಣೆಯಲ್ಲಿ ಮನೆ ಮನೆ ತಿರುಗಿ ಮಹಿಳೆಯರಿಗೆ ವಿದ್ಯಾಭ್ಯಾಸದ ಮಹತ್ವ ತಿಳಿ ಹೇಳಲು ಪ್ರಯತ್ನಪಟ್ಟರು. ಆದರೆ ಸಂಪ್ರದಾಯ ಮನೋಭಾವನೆಯ ಜನರು ಹೆಣ್ಣುಮಕ್ಕಳಿಗೇಕೆ ಶಿಕ್ಷಣ ಎಂದು ಕೇಳುತ್ತಿದ್ದರು. ಅವರ ಮುಖಕ್ಕೆ ರಪ್ಪನೆ ಬಾಗಿಲು ಹಾಕಿ ಹೆಣ್ಣು ಮಕ್ಕಳಿಗೆ ಓದು ಬರಹ ಬೇಡವೆಂದು ಮುಖ ತಿರುಗಿಸುತ್ತಿದ್ದರು.

ಆದರೆ ಜನರ ನಿರಾಶಾದಾಯಕ ಪ್ರತಿಕ್ರಿಯೆಯಿಂದ ಆಕೆ ಧೃತಿಗೆಡಲಿಲ್ಲ. ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ಸಂಬಂಧಪಟ್ಟಂತೆ ಸಾಕಷ್ಟು ಕೆಲಸ ಮಾಡಬೇಕೆಂಬ ಹಠ, ಛಲ ಅವರಲ್ಲಿ ಮೂಡಿತು. ಆಕೆ ನಿರಂತರವಾಗಿ ಪ್ರಯತ್ನ ಮಾಡುತ್ತಲೇ ಹೋದರು. ಸಂಘಟಿತವಾದ ಕೆಲಸ ಮಾತ್ರದಿಂದ ಏನಾದರೂ ಮಾಡಲು ಸಾಧ್ಯ ಎಂಬುದನ್ನು ಆಕೆ ಅನುಭವದಿಂದ ಕಲಿತರು. ಸಯಾನಿಯವರ ಪ್ರಯತ್ನದಿಂಧಾಗಿ ಮುಂಬಯಿಯಲ್ಲಿ ವಯಸ್ಕರ ಶಿಕ್ಷಣ ಸಮಿತಿ ರಚನೆಯಾಯಿತು. 1938ರಲ್ಲಿ ಆಕೆ ಮೊದಲ ವಾರ್ಷಿಕ ಯೋಜನೆಯೊಂದಿಗೆ ಕೆಲಸ ಮಾಡಿದರು. 1939ರಲ್ಲಿ ರಚನೆಯಾದ ಬಾಂಬೆಸಿಟಿ ಸೋಷಿಯಲ್ ಎಜುಕೇಶನ್ ಕಮಿಟಿ ಸಯಾನಿಯವರನ್ನು ಮುಸ್ಲಿಂ ಮಹಿಳೆಯರ ವಿದ್ಯಾಭ್ಯಾಸಕ್ಕಾಗಿ 50 ಕೇಂದ್ರಗಳನ್ನು ಸ್ಥಾಪಿಸುವಂತೆ ಕೇಳಿತು. ಕ್ರಮೇಣ 600 ಕೇಂದ್ರಗಳನ್ನು ತೆರೆದು ಶ್ಲಾಘನೀಯ ಕೆಲಸವನ್ನು ಸಯಾನಿ ಮಾಡಿದರು. ಅವರ ಈ ಪ್ರಯತ್ನ ಮುಸ್ಲಿಂ ಮಹಿಳೆಯರಿಗೆ ಮಾತ್ರ ಸೀಮಿತವಾಗದೆ, ಎಲ್ಲ ವರ್ಗದ ಮಹಿಳೆಯರನ್ನು ತಲುಪಲು ಸಾಧ್ಯವಾಯಿತು. ಸಯಾನಿಯವರ ಪ್ರಾಮಾಣಿಕ ಹಾಗೂ ನಿರಂತರ ಪ್ರಯತ್ನವನ್ನು ಗಮನಿಸಿದ ಬ್ರಿಟಿಷ್ ಸರ್ಕಾರ 1944ರಲ್ಲಿ ಆಕೆಯನ್ನು ವುಮೆನ್ಸ್ ಕಾನ್‌ಫರೆನ್ಸ್‌ನ ಕಾರ್ಯದರ್ಶಿಯನ್ನಾಗಿ ನೇಮಿಸಿತ್ತು.

ಸಯಾನಿಯವರು ಇಟ್ಟ ದೃಢ ಹೆಜ್ಜೆಯಿಂದಾಗಿ ವಯಸ್ಕರ ಶಿಕ್ಷಣ ಕ್ಷೇತ್ರದಲ್ಲಿ, ವಿಶೇಷವಾಗಿ ಮಹಿಳೆಯರ ಶಿಕ್ಷಣಕ್ಕೆ ಸಂಬಂಧಪಟ್ಟಂತೆ ಬಹಳಷ್ಟು ಯೋಜನೆಗಳು ರೂಪುಗೊಂಡವು. ಮಹಿಳೆಯರ ಸಬಲತೆಗಾಗಿ ಆಕೆ ಸಾಕಷ್ಟು ಶ್ರಮವಹಿಸಿದ್ದರು. 'ಒಬ್ಬರು ಮತ್ತೊಬ್ಬರಿಗೆ ಅಕ್ಷರ ಕಲಿಸಿ' ಎಂಬ ಘೋಷಣೆ ಅವರ ಕಾಲದಲ್ಲಿ ಜಾರಿಗೆಬಂದಿತು. ಪ್ರತಿದಿನ ಆಕೆ ಹಲವಾರು ಶಾಲೆಗಳಿಗೆ ಭೇಟಿ ನೀಡಿ ವಿದ್ಯಾರ್ಥಿಗಳು ಪ್ರತಿದಿನ 15 ನಿಮಿಷಗಳನ್ನು ವಯಸ್ಕರ ಶಿಕ್ಷಣಕ್ಕಾಗಿ ಮೀಸಲಿಡಬೇಕೆಂದು ಪ್ರೋತ್ಸಾಹಿಸುತ್ತಿದ್ದರು. ಮನೆಯಲ್ಲಿರುವ ವಯಸ್ಕರಿಗೆ, ನೆರೆಹೊರೆಯವರಿಗೆ ಅಕ್ಷರಗಳನ್ನು ಕಲಿಸಬೇಕೆಂಬ ಪ್ರೇರಣೆಯನ್ನು ನೀಡುತ್ತಿದ್ದರು. ಬೀದಿಯಲ್ಲಿ ಮಕ್ಕಳನ್ನು ಬಿಟ್ಟು ಹೊರಗೆ ದುಡಿಯಲು ಹೋಗುತ್ತಿದ್ದ ಬಡ ಮಹಿಳೆಯರ ಬಗ್ಗೆ ಆಕೆ ಹೆಚ್ಚು ಕಾಳಜಿಯನ್ನು ತೋರಿಸುತ್ತಿದ್ದರು.

ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಸಯಾನಿ ವಯಸ್ಕರಿಗಾಗಿ 'ರಹಬರ್' ಎಂಬ ಪತ್ರಿಕೆಯನ್ನು ಪ್ರಕಟಿಸುತ್ತಿದ್ದರು. ಹೊಸ ಅಕ್ಷರಸ್ಥರನ್ನು ತಲುಪುವ ಉದ್ದೇಶದಿಂದ. 1940ರಿಂದ ಈ ಪತ್ರಿಕೆ ಉರ್ದು ಹಾಗೂ ಹಿಂದಿ ಮಿಶ್ರಣವಾದ ಹಿಂದುಸ್ತಾನಿ ಭಾಷೆಯಲ್ಲಿ ಪ್ರಕಟವಾಗುತ್ತಿತ್ತು. ದೇಶದಾದ್ಯಂತ ಜೈಲಿನಲ್ಲಿದ್ದ ಸಾವಿರಾರು ಸ್ವಾತಂತ್ರ್ಯ ಹೋರಾಟಗಾರರು ಈ ಪತ್ರಿಕೆಯನ್ನು ಓದುತ್ತಿದ್ದರು. ಆದರೆ ಸ್ವಾತಂತ್ರ್ಯ ಬಂದ ನಂತರ ಪತ್ರಿಕೆಯ ಭಾಷೆ ವಿವಾದವನ್ನು ಹುಟ್ಟಿಹಾಕಿತು. ವಿದ್ಯಾಭ್ಯಾಸಕ್ಕೆ ಸಂಬಂಧಪಟ್ಟಂತೆ ಅಂತರರಾಷ್ಟ್ರೀಯ ಮಟ್ಟದ ಸೆಮಿನಾರ್‌ಗಳಲ್ಲಿ ಸಯಾನಿ ಭಾಗವಹಿಸಿದ್ದರು. 1953ರಲ್ಲಿ ಫ್ರಾನ್ಸ್‌ನಲ್ಲಿ ನಡೆದ ಯುನೆಸ್ಕೊ ಕಾನ್‌ಫರೆನ್ಸ್‌ನಲ್ಲಿ ಸಹ ಭಾಗವಹಿಸಿದ್ದರು. ಆಕೆಯನ್ನು ಸೆಳೆದ ಮತ್ತೊಂದು ಕ್ಷೇತ್ರವೆಂದರೆ ಭಾರತ ಹಾಗೂ ಪಾಕಿಸ್ತಾನದ ನಡುವೆ ಶಾಂತಿಯುತ ಹಾಗೂ ಸೌಹಾರ್ದಯುತ ಸಂಬಂಧವನ್ನು ಬೆಳೆಸುವಂತೆ ಮಾಡುವುದು. ಎರಡು ದೇಶದ ಪ್ರಮುಖ ನಾಯಕರನ್ನು ಭೇಟಿಯಾಗಿ ಎರಡು ದೇಶಗಳ ನಡುವೆ ಶಾಂತಿಯುತ ಸಂಬಂಧವನ್ನು ಮೂಡಿಸುವ ಪ್ರಕ್ರಿಯೆಯನ್ನು ಪ್ರಾರಂಭಿಸುತ್ತಿದ್ದರು. ಆಕೆಯ ಜೀವನದ ಮುಖ್ಯ ಉದ್ದೇಶವೇ ಭಾರತದಲ್ಲಿ ಅನಕ್ಷರತೆಯನ್ನು ತೊಲಗಿಸುವುದಾಗಿತ್ತು. 1960ರಲ್ಲಿ ಆಕೆಗೆ ಪದ್ಮಶ್ರೀ ಪ್ರಶಸ್ತಿಯನ್ನು ನೀಡಲಾಯಿತು. 1969ರಲ್ಲಿ ನೆಹರೂ ಲಿಟರಸಿ ಪ್ರಶಸ್ತಿಯನ್ನು ಆಕೆ ಪಡೆದಿದ್ದರು. 1987ರಲ್ಲಿ ಸಯಾನಿ ಮರಣಹೊಂದಿದರು. ವಯಸ್ಕರ ಶಿಕ್ಷಣಕ್ಷೇತ್ರದ ಚಟುವಟಿಕೆಗಳಲ್ಲಿ ಹಾಗೂ ಸಮಾಜಮುಖಿ ಕಾರ್ಯಕ್ರಮಗಳಲ್ಲಿ ಸಂಪೂರ್ಣವಾಗಿ ತನ್ನನ್ನು ತೊಡಗಿಸಿಕೊಂಡ ಸಯಾನಿ ಮರಳಿ ಏನನ್ನೂ ಪಡೆಯುವ ನಿರೀಕ್ಷೆಯನ್ನು ಹೊಂದಿರಲಿಲ್ಲ.

■ *ದಾನಿಶ್ ಖಾನ್*

*ಮೂಲ : ವುಮೆನ್ ಫೀಚರ್ ಸರ್ವಿಸ್*

*(ಸಂಗ್ರಹ : ಎಚ್.ಎಸ್. ರಾಜೇಶ್ವರಿ)*




# ಹಣಿಯುತ್ತಲೇ ನಾಶವಾಗುವ ಪ್ರಭಂಜಕ ವಿನ್ಯಾಸದ 'ಕವಲು'

■ *ಡಾ. ಎಂ.ಎಸ್. ಆಶಾದೇವಿ*

ಇತ್ತೀಚೆಗೆ ಕಾದಂಬರಿಯ ರೂಪದಲ್ಲಿ (ಕಾಮರೂಪಿ) ಪ್ರಕಟವಾಗಿರುವ 'ಕವಲು' ಕೃತಿಯು ಶ್ರೀಯುತ ಎಸ್.ಎಲ್.ಭೈರಪ್ಪನವರ ಒಟ್ಟೂ ಬರವಣಿಗೆಯ ಹಿಂದಿನ ಜೀವವಿರೋಧಿ ದೃಷ್ಟಿಕೋನದ ಮುಂದು ವರಿಕೆಯೇ ಆಗಿದೆ. ಗಮನಿಸಲೇಬೇಕಾದ ಇನ್ನೂ ಒಂದು ಮುಖ್ಯ ಸಂಗತಿಯೆಂದರೆ, ಅಗೊಮ್ಮೆ ಈಗೊಮ್ಮೆ ಅವರ ಕೈ ಹಿಡಿಯುತ್ತಿದ್ದ ಸೃಜನಶೀಲತೆಯು ಇಲ್ಲಿ ಸಂಪೂರ್ಣವಾಗಿ ಕಣ್ಮರೆಯಾಗಿದ್ದು, ಓದಲೇಬೇಕೆನ್ನುವ ಹಠವಿಲ್ಲದೆ ಈ ಕೃತಿಯನ್ನು ಓದುವುದೇ ಕಷ್ಟ ಎನ್ನುವುದನ್ನು ಪ್ರಾಯಶಃ ಭೈರಪ್ಪನವರ ಪ್ರಾಮಾಣಿಕ ಓದುಗ ಅಭಿಮಾನಿಗಳೂ ಒಪ್ಪಿಯಾರು!

ಈ ಕೃತಿಯ ಆರಂಭದ ಕೆಲವು ಪುಟಗಳನ್ನು ಓದುವ ಹೊತ್ತಿಗೇ ಕಾದಂಬರಿಯ ಘೋಷಿತ ಉದ್ದೇಶ ಸ್ಪಷ್ಟವಾಗಿಬಿಡುತ್ತದೆ. ಕಾದಂಬರಿಯ ಕೊನೆ ಯಾವುದು ಎನ್ನುವುದನ್ನು ಊಹಿಸುವುದು ಯಾರಿಗೂ ಸಾಧ್ಯವಾಗುತ್ತದೆ. ಕೃತಿಕಾರನೊಬ್ಬನ ದೃಷ್ಟಿಕೋನಗಳು ಆರಂಭದಲ್ಲಿಯೇ ಖಚಿತವಾಗುವುದು ಕಲಾಕೃತಿಯ ಕಟ್ಟುವಿಕೆಯ ದೃಷ್ಟಿಯಿಂದ ಮುಖ್ಯವೂ ಅಲ್ಲ; ಅಮುಖ್ಯವೂ ಅಲ್ಲ. ಇಷ್ಟಕ್ಕೂ ಕವಲು ಕಾದಂಬರಿಯನ್ನು 'ಸಾಹಿತ್ಯ ಪಠ್ಯ'ವಾಗಿ ಚರ್ಚಿಸುವುದು ಅಸಾಧ್ಯ. ಆದರೆ ತನ್ನ ಉದ್ದೇಶಿತ ನಿಲುವುಗಳು ಮತ್ತು ಆಶಯಗಳ ಪ್ರತಿಪಾದನೆಗಾಗಿ ಕಲೆಯ ಮಾಧ್ಯಮ ವೊಂದನ್ನು ಬಳಸಿಕೊಳ್ಳುವುದರ ಬಗ್ಗೆ ಚರ್ಚೆಗಳು ಯಾವಾಗಲೂ ನಡೆಯುತ್ತಲೇ ಇರುತ್ತವೆ. ಕಲಾಮೀಮಾಂಸೆಯ ಅಭಿಜಾತ ಮೂಲ ಗುಣಲಕ್ಷಣಕ್ಕೆ ಈ ಬಗೆಯ ಕೃತಿಗಳು ಬಗೆಯುವ ದ್ರೋಹವನ್ನು ಯಾವಾಗಲೂ ವಿರೋಧಿಸಲಾಗುತ್ತದೆ.

'ಕವಲು' ಕಾದಂಬರಿಯು ಸಮಕಾಲೀನ ಕೌಟುಂಬಿಕ ವ್ಯವಸ್ಥೆಯ 'ಕುಸಿತ'ವನ್ನು, 'ಬದಲಾವಣೆ'ಗಳನ್ನು ಅರ್ಥ ಮಾಡಿಕೊಳ್ಳುವ ಪ್ರಯತ್ನದ್ದೆಂದು ಭೈರಪ್ಪನವರು ಹೇಳುತ್ತಾರೆ.

ಈ ನಮ್ಮ ಕಾಲವು ಹಲವು ನಿರ್ಣಾಯಕ ಚಲನೆಗಳನ್ನು ಎಲ್ಲ ನೆಲೆಗಳಲ್ಲಿ ಸಾಧಿಸುವ ಆಶಯದ ಸಂಕ್ರಮಣದ ಕಾಲಘಟ್ಟ. ಗಂಡು–ಹೆಣ್ಣಿನ ಸಂಬಂಧದ ಶ್ರೇಣೀಕರಣವೂ ಸೇರಿದಂತೆ ಸ್ಥಾಪಿತವಾಗಿರುವ ಶ್ರೇಣೀಕರಣಗಳನ್ನು ವಿರೋಧಿಸುತ್ತಲೇ ಸಂಬಂಧಗಳ ಅಧಿಕಾರ ಕೇಂದ್ರೀಕರಣಗಳನ್ನು ವಿಕೇಂದ್ರೀಕರಣಗೊಳಿಸುವ ಪ್ರಯತ್ನ ನಡೆಯುತ್ತಿದೆ.

ಸಮುದಾಯವೊಂದು ಹೀಗೆ ನಿರ್ಣಾಯಕ ಪಲ್ಲಟಗಳಿಗೆ ತನ್ನನ್ನು ಒಡ್ಡಿಕೊಂಡಾಗ ಅಲ್ಲೋಲ ಕಲ್ಲೋಲಗಳಾಗುವುದು ತೀರ ಸಹಜ. ಅನಿರೀಕ್ಷಿತವಾದ ತಿರುವುಗಳು ಘಟಿಸುವುದೂ ಸಾಧ್ಯ. ಈ ಬಗೆಯ ಕೋಲಾಹಲಗಳು ಬದಲಾವಣೆಗೆ ಒಳಗಾಗುತ್ತಿರುವ ಎಲ್ಲ ವಲಯ ಗಳಲ್ಲಿಯೂ ಇರುತ್ತವೆ. ಆದರೆ, ಅಧಿಕಾರದ ಕೇಂದ್ರೀಕರಣದ ವ್ಯವಸ್ಥೆ ಯಲ್ಲಿ ಯಜಮಾನಿಕೆಯು ನಿಯಂತ್ರಕ ಕೇಂದ್ರದಲ್ಲಿದ್ದು ಅಧೀನ ವರ್ಗದ ತಲ್ಲಣಗಳು ಭಿನ್ನ ಸ್ವರೂಪದವಾಗಿರುತ್ತವೆ. 'ಅಭದ್ರತೆ'ಯ ಆತಂಕಗಳು ಅವರ ಪ್ರತಿಕ್ರಿಯೆಗಳನ್ನು ಉತ್ಪ್ರೇಕ್ಷಿತ ನೆಲೆಗೆ ಒಯ್ದು ನಿಲ್ಲಿಸುತ್ತವೆ. ಭೈರಪ್ಪನವರ ಕವಲು ಕಾದಂಬರಿಯುದ್ದಕ್ಕೂ ಕಾಣಿಸುವುದು ಉತ್ಪ್ರೇಕ್ಷಿತ ನೆಲೆಗಳು ಮಾತ್ರವಲ್ಲ, ಕಪೋಲ ಕಲ್ಪಿತವೂ, ಏಕಪಕ್ಷೀಯವೂ, ಅಮಾನವೀಯವೂ ಆದ ಪ್ರಮೇಯಗಳನ್ನು ಸೃಷ್ಟಿಸಿಕೊಂಡು ಅವುಗಳ ಸಮರ್ಥನೆಗಾಗಿ ಉತ್ಸವದಿಂದ ಗಾವುದ ದೂರದಲ್ಲಿರುವ ಕತೆಯನ್ನು ಕೃತಕವಾಗಿ ಕಟ್ಟಲಾಗಿದೆ.

ಯಾವುದೇ ವಿಷಯದ ಅತಿರಂಜಕತೆಯು ನಮ್ಮನ್ನು ಕುರುಡಾಗಿಸುತ್ತದೆಯಷ್ಟೆ. 'ಕವಲು' ವಿನ ಉದ್ದಕ್ಕೂ ಈ ಕುರುಡುತನಕ್ಕೆ ಅನೇಕ ಸಾಕ್ಷಿಗಳಿವೆ. ಮನುಷ್ಯ ಸ್ವಭಾವದ ಪ್ರಾಥಮಿಕ ತಿಳಿವಳಿಕೆಯೂ ಇರದ ಅಂಧತ್ವದಲ್ಲಿ ಇಲ್ಲಿನ ಪಾತ್ರಗಳು ಕಪ್ಪು–ಬಿಳುಪು ವರ್ಗೀಕರಣದಲ್ಲಿ ಸೃಷ್ಟಿಯಾಗಿವೆ. ಕಾದಂಬರಿಯ ನಾಯಕ(?!) ಜಯಕುಮಾರನಿಗೆ ಅನುಕೂಲಕರವಾಗುವವರೆಲ್ಲರೂ ಬಿಳಿಬಣ್ಣದಲ್ಲಿ, ವಿರೋಧಿಗಳೆಲ್ಲರೂ ಕಾಳೋರಗದ ಕಪ್ಪಿನಲ್ಲಿ ಚಿತ್ರಿತವಾಗಿದ್ದಾರೆ.

ಬರಹಗಾರರ ಶಕ್ತಿ–ಮಿತಿಗಳೇನೇ ಇರಲಿ, ಸೃಜನಶೀಲ ಬರಹಗಾರ ರಲ್ಲಿ ಇರಬೇಕಾದ ಮೂಲದ್ರವ್ಯವೆಂದರೆ, ಬದುಕು ಮತ್ತು ಮನುಷ್ಯರ ಬಗೆಗಿನ ಸಹಜ ಪ್ರೀತಿ. ಬದುಕಿನಲ್ಲಿನ ಹತಾಶೆಯ, ದುರಂತದ, ಆತ್ಯಂತಿಕ ದುಃಖದ ಘಳಿಗೆಗಳ ವಾಸ್ತವತೆಯು ಎಂದಿಗೂ ಬದುಕಿಗೆ ಬೆನ್ನುತಿರುಗಿಸುವ ಸಿನಿಕತನವಾಗಿ ಕಾಣಿಸುವುದಿಲ್ಲ. ಬದುಕು ಬೇಡವೆನ್ನುವ ವ್ಯಕ್ತಿಗಳು ಎಂದೂ ನಿಜವಾದ ರೀತಿಯಲ್ಲಿ ಬರಹಗಾರ ರಾಗಿಲ್ಲ. ಸಂಬಂಧಗಳ ಘರ್ಷಣೆಗಳು, ವಿಫಲತೆಗಳು, ದ್ರೋಹದ ಸಾಧ್ಯತೆಗಳು ಒಟ್ಟೂ ಮನುಷ್ಯರ ಮೇಲಿನ ದ್ವೇಷವಾಗಿ ಬಿಡಬಹುದಾದರೆ, ಇಂಥ ಲೇಖಕ/ಲೇಖಕಿ ನಡೆಸುವ ಬದುಕಿನ ಶೋಧದ ಸ್ವರೂಪ ಏನಾಗಿರಬಲ್ಲದು? ಅದು ಬದುಕಿನ ಕ್ರೌರ್ಯದ ಮತ್ತು ಸಂಬಂಧಗಳ ಘೋರ ಸೋಲುಗಳ ಸತತ ಮೆರವಣಿಗೆಯಾಗಿ ಬಿಡುತ್ತದೆ. ಕವಲು ಕಾದಂಬರಿ ಹೀಗೆ ಸೋಲುಗಳ ದುರಂತ ಸರಮಾಲೆ. ಇದರ ನಿರ್ಮಾಪಕಿಯಾಗಿ ಮತ್ತು ನಿರ್ದೇಶಕಿಯಾಗಿ ಹೆಣ್ಣಿದ್ದಾಳೆ. ಎಂದರೆ ಆಧುನಿಕ ವಿದ್ಯಮಾನಗಳ ಹಿನ್ನೆಲೆಯಲ್ಲಿ ಕೌಟುಂಬಿಕ ವ್ಯವಸ್ಥೆಯಲ್ಲಿ ಉಂಟಾಗುತ್ತಿರುವ ಕವಲು ಹೆಣ್ಣಿನಿಂದ, ಅವಳ ಆಧುನಿಕ ಸ್ತ್ರೀವಾದಿ ನಿಲುವುಗಳಿಂದ. ಕಾದಂಬರಿಯುದ್ದಕ್ಕೂ ಸ್ತ್ರೀವಾದಿ ಕೃತಿಗಳು, ಅಧ್ಯಯನ ಗಳನ್ನು ಅನಾಗರಿಕವೆನಿಸುವ ಅಸಹನೆಯಲ್ಲಿ ಅಣಕದ ಮಾದರಿಯಲ್ಲಿ ತೋರಿಸಲಾಗಿದೆ.

ಭೈರಪ್ಪನವರ ಬಗೆಗೆ ಅನುಕಂಪ ಮೂಡುವುದು ಈ ಕಾರಣಕ್ಕಾಗಿ. ಸ್ತ್ರೀವಾದವನ್ನು ಒಂದು ಸೈದ್ಧಾಂತಿಕ ನಿಲುವಾಗಿ, ಬೌದ್ಧಿಕ ಗ್ರಹಿಕೆಯಿಂದ ಮಾತ್ರ ತಿಳಿಯುವ ಮೂಲಕ (ಈ ಬೌದ್ಧಿಕ ನೆಲೆಯು ಪುರುಷ ದ್ವೇಷಿಯೆಂದೂ, ಗಂಡಸನ್ನು ಸದೆ ಬಡಿಯಲು ಹೆಣ್ಣು ಕಂಡು ಹಿಡಿದಿರುವ ಅಪಾಯಕಾರಿ ಆಯುಧವೆಂದೂ ಭೈರಪ್ಪನವರು ತಿಳಿದ ಹಾಗೆ ಕಾಣಿಸುತ್ತದೆ ಮತ್ತು ಹೀಗೆ ಸ್ತ್ರೀವಾದಿ ಆಯುಧವನ್ನು ಬಳಸಿ ಕುಟುಂಬವನ್ನು ಹತ್ಯೆ ಮಾಡುವ ಹೆಣ್ಣಿಗೆ 'ಭಾವ ವಲಯ'ವಾಗಲಿ, ಕೌಟುಂಬಿಕ ನೆಲೆಯಲ್ಲಿನ ನಂಜಿಕೆಯಾಗಲೀ ಇರುವುದೇ ಇಲ್ಲವೆಂದು ಭೈರಪ್ಪನವರು ವಾದಿಸುತ್ತಾರೆ.) ಸ್ತ್ರೀವಾದವು ಒಂದು ಬದುಕಿನ ಕ್ರಮ ಎನ್ನುವುದನ್ನು ಅರ್ಥ ಮಾಡಿಕೊಳ್ಳುವುದರಲ್ಲಿಯೇ ಭೈರಪ್ಪನವರಿಗೆ ಸಮಸ್ಯೆಯಿದೆ. ಆದ್ದರಿಂದಲೇ ಸ್ತ್ರೀ ವಾದವು ಸಮಾಜದ ಸ್ವಾಸ್ಥ್ಯಕ್ಕೆ

ವಿರುದ್ಧವಾದುದು ಎಂದು ಅವರು ತಿಳಿಯುತ್ತಾರೆ. ಯಾವ ಬದುಕಿನ ಹೊಸ ಕ್ರಮಗಳೂ ಸಮುದಾಯದ ಸ್ವಾಸ್ಥ್ಯವನ್ನು ವಿರೋಧಿಸುವುದಿಲ್ಲ. ಹಾಗೆ ನೋಡಿದರೆ ಸ್ತ್ರೀವಾದದ ಚಿಂತನೆಗಳು ಹೆಣ್ಣಿನ ಸ್ವಾಯತ್ತತೆಯ ಪ್ರಶ್ನೆಗೆ ನೀಡುವ ಆದ್ಯತೆಯನ್ನು ಸಮಾಜದ ಸೌಷ್ಠವಕ್ಕೂ ನೀಡುತ್ತವೆ. ಭೈರಪ್ಪನವರು ಹೇಳುವ ಹಾಗೆ ಸ್ವಾರ್ಥದ,ಕ್ರೌರ್ಯದ ಮತ್ತು ದುರಾಶೆಯ ಕುಬ್ಜ ಕೇಂದ್ರಗಳಾಗಿ ಅಲ್ಲವೇ ಅಲ್ಲ.

ಭೈರಪ್ಪನವರ ಜೀವ ವಿರೋಧಿ ನಿಲುವು ಈ ಕೃತಿಯಲ್ಲಿ ಒಂದು ಹಂತವನ್ನು ತಲುಪಿದೆ. ಈ ಜೀವವಿರೋಧಿ ನಿಲುವು ಬೈರಪ್ಪನವರಲ್ಲಿ ಯಾವಾಗಲೂ ಒಂದು ನಿರ್ದಿಷ್ಟ ವಿನ್ಯಾಸದಲ್ಲಿಯೇ ಕಾಣಿಸಿಕೊಳ್ಳುತ್ತದೆ. ಪ್ರತಿಸ್ಪರ್ಧಿಯನ್ನು ಹುಡುಕಿ ಅದರೊಂದಿಗಿನ ಸತತ ಸಂಘರ್ಷದಲ್ಲಿ ಅದನ್ನು ಹಣಿಯುತ್ತಲೇ ತಾನೂ ನಾಶವಾಗುವ ಪ್ರಭಂಜಕ ವಿನ್ಯಾಸ ಇದು. ಕವಲುವಿನ ಜಯಕುಮಾರನನ್ನೇ ನೋಡಿ, ತನ್ನ ತಪ್ಪುಗಳಿಗೆಲ್ಲಾ ಹೆಣ್ಣನ್ನು ಹೊಣೆಗಾರಳನ್ನಾಗಿ ಮಾಡುತ್ತಲೇ ತಾನೂ ನಾಶವಾಗುತ್ತಾನೆ.

ಇದನ್ನು ಕೌಟುಂಬಿಕ ಮೌಲ್ಯಗಳ ಶೋಧ ಎಂದು ಕರೆಯುವುದು ಹೇಗೆ? ಪುರುಷ ಪ್ರಾಧಾನ್ಯದ ನೆಲೆಯೊಂದನ್ನು ಬಿಟ್ಟು, ಅಧಿಕಾರ ಕೇಂದ್ರ ತಪ್ಪಿ ಹೋಗುತ್ತಿರುವುದರ ಬಗೆಗಿನ ಆತಂಕವನ್ನು ಬಿಟ್ಟು ಮಿಕ್ಕಿದ್ದೇನೂ ಈ ಕಾದಂಬರಿಯಲ್ಲಿ ಕಾಣಿಸುವುದಿಲ್ಲ. ❑

---

# ಒಂದು ಕೆಳದರ್ಜೆಯ ಕಾದಂಬರಿ 'ಕವಲು'

■ *ನಾಗಮಣಿ ಎಸ್.ಎನ್.*
*ಚಿಕ್ಕಮಗಳೂರು*

ಕಾದಂಬರಿ ಓದುವ ಮೊದಲೆ ವಿಮರ್ಶೆ ಓದಿದ್ದೆ. ಕಾದಂಬರಿ ಯನ್ನು ಓದಲೇಬೇಕೆಂಬ ಹಟಕ್ಕೆ ಬಿದ್ದು ಓದಿದೆ. 'ಗೃಹಭಂಗ' ಬರೆದ ಭೈರಪ್ಪ ಇವರೆಯೇ ಎನಿಸಿತು! ಒಂದು ಹೆಣ್ಣಿನ ಶೋಷಣೆಯನ್ನು, ಆಕೆಯ ಅಸಹಾಯಕತೆಯನ್ನು ಅದರೊಟ್ಟಿಗೆ ಅವಳಿಗಿರುವ ಧಾರಣಶಕ್ತಿ, ಕರ್ತೃತ್ವ ಶಕ್ತಿಯನ್ನು ಬಹಳ ಗಾಢವಾಗಿ ಕಟ್ಟಿಕೊಟ್ಟ ಭೈರಪ್ಪ ಹಟಕ್ಕೆ ಬಿದ್ದವರಂತೆ ಸ್ತ್ರೀವಾದಿಗಳನ್ನು ಅತ್ಯಂತ ಹೀನಾಯವಾಗಿ ಚಿತ್ರಿಸಿರುವುದೇಕೆಂದು ಅರ್ಥವಾಗಲಿಲ್ಲ.

ಇರಬಹುದು, ಎಲ್ಲ ಕಾನೂನುಗಳ ದುರ್ಬಳಕೆಯಾಗಿರುವಂತೆ ವರದಕ್ಷಿಣೆಯ ಕಾನೂನೂ ದುರ್ಬಳಕೆಯಾಗಿರಬಹುದು. ಎಲ್ಲೋ ಒಂದಿಬ್ಬರು ಮಹಿಳೆಯರು ಗಂಡಸರಿಗೆ ಕಿರುಕುಳವನ್ನೂ ನೀಡಿರ ಬಹುದು. ಆದರೆ ಶೇಕಡಾಂಶ ಎಷ್ಟು? ಒಂದು ಅಥವಾ ಮೂರು! ಭೈರಪ್ಪನವರಿಗೆ ಕಾಣುವ ಕಣ್ಣು ಹೊರಟ್ಹೋಗಿದೆಯೇ? (ವಯಸ್ಸಾಗಿ ಕಣ್ಣು ಕಾಣುತ್ತಿಲ್ಲ!) ದಿನವೂ ಹೆಣ್ಣಿನ ಮೇಲೆ ನಡೆಯುತ್ತಿರುವ ಅತ್ಯಾಚಾರ, ಹಿಂಸೆಗಳಿಗೆ ಕಿವುಡರೂ ಆಗಿದ್ದಾರೆಯೇ?

ಭಾರತದ ಸಂಸ್ಕೃತಿ ಮಾತ್ರ ಉನ್ನತ, ಪಶ್ಚಿಮದ್ದೆಲ್ಲ ಅಧೋಗತ ಎನ್ನುವ ಅವರ ತಿಳಿವಳಿಕೆಯಲ್ಲಿ 'ವಂಶವೃಕ್ಷ' ಕಾದಂಬರಿಯಿಂದ ಹಿಡಿದು ಇಲ್ಲಿಯವರೆಗೆ ಏನೂ ಬದಲಾಗಿಲ್ಲ. ನಚಿಕೇತ (ಕಾದಂಬರಿಯ ಪಾತ್ರ) ಎರಡನೇ ಹೆಂಡತಿ ಜೊತೆಯಿರುವಾಗ ಅವನ ಬಾಯಿಂದ ಒಂದು ಮಾತು ಹೊರಡುತ್ತದೆ. "ಪಶ್ಚಿಮದ ಗಂಡಸಾಗಿದ್ದರೆ ಹೊಡೆದು ಉರುಳಿಸುತ್ತಿದ್ದ (ಹೆಂಡತಿಯನ್ನು), ನಾನೋ ಭಾರತೀಯ". ಆಹಾ! ಇದಕ್ಕಿಂತ ವ್ಯಂಗ್ಯಬೇಕೆ! ಹಾಗೆ ನೋಡಿದರೆ ಪಾಶ್ಚಾತ್ಯರಾರೂ ಭಾರತೀಯರಂತೆ ದಿನವೂ ಹೆಂಡತಿಗೆ ದನಕ್ಕೆ ಬಡಿದಂಗೆ ಬಡಿಯುವುದಿಲ್ಲ. ಹಾಗೊಂದು ವೇಳೆ ಹೊಡೆದದ್ದೆ ಆದರೆ ನಚಿಕೇತನೆ ಹೇಳಿದಂತೆ ಕಂಬಿ ಎಣಿಸಬೇಕಾಗುತ್ತದೆ. ಏಕೆಂದರೆ ಕಾನೂನು ಅಲ್ಲಿ ಅಷ್ಟೊಂದು ಗಟ್ಟಿ.

ಭೈರಪ್ಪನವರಿಗೆ ಹಣೆಗಿಡದ, ಹೂ ಮುಡಿಯದ, ಸೀರೆ ಉಡದ, ಬಳೆ, ಸರ ತೊಡದ ಮಹಿಳೆಯರು ವಿಧವೆಯರೊ, ಮುಸಲ್ಮಾನ ಮಹಿಳೆಯರೊ ಎಂದು ತಿಳಿಯುವುದಿಲ್ಲವಂತೆ! ಒಂದು ವೇಳೆ ಅವರು ವಿಧವೆಯರೊ ಮುಸಲ್ಮಾನರೊ ಆಗಿದ್ದರೆ ಮನುಷ್ಯರಾಗಿರುವುದಿಲ್ಲವೆ? ಬೆಳಿಗ್ಗೆ ಎದ್ದು ರಾತ್ರಿ ಮಲಗುವವರೆಗೆ ಕುಳಿತು ಉಸಿರಾಡಲು ಪುರುಸೊತ್ತಿಲ್ಲದ ಹಳ್ಳಿ ಮಹಿಳೆಯರು ಹಣೆಗಿಡುವುದಕ್ಕೇ ಸಮಯ ವಿಲ್ಲದವರು. ಹಬ್ಬ ಹರಿದಿನ ಬಿಟ್ಟರೆ ಬೇರೆ ದಿನಗಳಲ್ಲಿ ಸರಿಯಾಗಿ ತಲೆ ಬಾಚಲೂ ವೇಳೆಯಿರುವುದಿಲ್ಲ, ಹೀಗೆ ಹೂ, ಬಳೆ, ಕುಂಕುಮ, ಸೀರೆ ಎಂದು ಯಾವುದೋ ಒಂದು ಯಜಮಾನ ಸಂಸ್ಕೃತಿಯ ವಕಾಲತ್ತು ವಹಿಸುತ್ತಿರುವುದೇಕೆ? ಮಲಯಾಳಂ ಮಹಿಳೆಯರು (ಬಹಳ ಹಿಂದೆ) ಈಗಲೂ ಇರಬಹುದು–ಒಂದು ತುಂಡು ಲಂಗ ಹಾಗೂ ರವಿಕೆ ಮಾತ್ರ ಧರಿಸುತ್ತಿದ್ದರು. ಅದೇ ಅವರ ದಿನನಿತ್ಯದ ಸಹಜ ಉಡುಪು. ಅವರು ಭಾರತೀಯರಲ್ಲವೆ? ಅವರಲ್ಲಿ ಮಾತೃಪ್ರೇಮ, ಜೀವನ ಪ್ರೀತಿಗಳಿರ ಲಿಲ್ಲವೆ? ಭೈರಪ್ಪನವರ ಅಜ್ಜಿಯ ಕಾಲದಲ್ಲಿ ಮಹಿಳೆಯರು ರವಿಕೆಯನ್ನೇ ಧರಿಸುತ್ತಿರಲಿಲ್ಲವಲ್ಲ! ಹಾಗೆಯೇ ಭಾರತದ ಈಶಾನ್ಯ ರಾಜ್ಯಗಳಾದ ನಾಗಾಲ್ಯಾಂಡ್, ಮಣಿಪುರ ಮುಂತಾದ ರಾಜ್ಯಗಳ ಮಹಿಳೆಯರ ವೇಷಭೂಷಣ ಭೈರಪ್ಪನವರ ಅಳತೆಪಟ್ಟಿಗೆ ಹೊಂದದು. ಅವರನ್ನೇನು ಮಾಡೋಣ?

ಗಂಡನ ಹೆಸರು ಹಿಡಿದು ಕರೆಯುವುದು ಅಸಂಗತವೆ? ಆ ಸೀತಾ, ದ್ರೌಪದಿಯರೆ ಗಂಡಂದಿರನ್ನು ರಾಮ, ಭೀಮ ಎಂದು ಕರೆಯುತ್ತಿದ್ದರು. "ಪರ್ವ"ವನ್ನು ಬರೆದವರು ಇದೇ ಭೈರಪ್ಪನಲ್ಲವೆ! ಬೀದಿಯಲ್ಲಿ ಬದುಕುವ ಜನರಿಗೆ ಈ ಭೈರಪ್ಪನವರ ಯಾವ ಸಂಸ್ಕೃತಿಯೂ ಅನ್ವಯವಾಗುವುದಿಲ್ಲ. ಅವರ ಬದುಕೇ ಒಂದು ಹೋರಾಟವಾಗಿರುತ್ತದೆ. ಅಲ್ಲಿ ಮೇಲು, ಕೀಳು, ಸದಾಚಾರ, ಅನಾಚಾರ ಒಂದಕ್ಕೂ ಅರ್ಥವಿಲ್ಲ. ಜೀವದಿಂದಿರುವುದೇ ದೊಡ್ಡ ಸಾಧನೆ. ಅವರನ್ನೆಲ್ಲ ಅರಬ್ಬೀಸಮುದ್ರಕ್ಕೆ ತಳ್ಳಿಬಿಡೋಣವೆ? ಹೇಗೂ ಭೈರಪ್ಪನವರ ಸಂಸ್ಕೃತಿಗೆ ಅದೇಬೇಕು, ಶುದ್ಧ ಭಾರತವಾಗುಳಿಯ ಬೇಕಾದರೆ! ಅಲ್ಲವೆ?

ಇಂಥ ಒಂದು ಕೆಳದರ್ಜೆಯ ಕಾದಂಬರಿ ಈಗಾಗಲೇ ಎಷ್ಟೋ ಮುದ್ರಣಗಳನ್ನು ಕಂಡಿದೆ. ಕೊಂಡು ಓದುವವರಿದ್ದಾರೆಂದು ಸಂತೋಷಪಡಬೇಕೊ ಅಥವಾ ಅವರ ಕೀಳು ಅಭಿರುಚಿ ಕಂಡು ಮರುಗಬೇಕೊ? ಏಕೆಂದರೆ ಯಾವಾಗಲೂ ಸಮಷ್ಟಿಪ್ರಜ್ಞೆಯಿಂದ ಸಾಮಾಜಿಕನ್ಯಾಯಕ್ಕಾಗಿ ತುಡಿಯುವವರ ಸಂಖ್ಯೆ ಕಡಿಮೆಯೇ ಅಲ್ಲವೆ? ಭೈರಪ್ಪನವರ ಇಂಥ ಚಿಂತನಾಕ್ರಮಗಳನ್ನೇ ಉಪ್ಪಿನ ಕಾಯಿಯಂತೆ ಚಪ್ಪರಿಸುವವರನ್ನು ಕಂಡು ಖೇದವಾಗುತ್ತಿದೆ. ❑




# ಗೂಡು ಮತ್ತು ಆಕಾಶ

**(ಕೆ. ಸತ್ಯನಾರಾಯಣ ಅವರ 'ಈ ತನಕದ ಕಥೆಗಳು'-ಒಂದು ಅನುಸಂಧಾನ)**

■ ಗಿರಿಜಾಶಾಸ್ತ್ರಿ

"ಹಕ್ಕಿಗಳನ್ನು ನೋಡಿ, ಪ್ರಾಣಿಗಳನ್ನು ನೋಡಿ, ಸಂಜೆಯಾದ ತಕ್ಷಣ ಹೇಗೆ ಗೂಡಿಗೆ ಹಿಂದಿರುಗುತ್ತವೆ. ಹೇಗೆ ಗೂಡು ಸೇರಿ ಪಾಡು ನೋಡಿಕೊಳ್ಳುತ್ತವೆ. ಲಕ್ಷಾಂತರ ಮೈಲಿ ಹೋದ್ರು, ಬೇರೆ ಖಂಡಕ್ಕೆ ಹೋದ್ರು, ಮೊದಲು ಹಕ್ಕಿಗಳು ಮಾಡೋ ಕೆಲಸ ಅಂದ್ರೆ ಗೂಡು ಕಟ್ಟೋದು. ಅದೇನೋ ಮನುಷ್ಯನದು ಮಾತ್ರವೇ ಊನ. ಚೂರು ಹಣ, ಚೂರು ಹೆಸರು, ಚೂರು ದವಲತ್ತು ಬಂದರು ಸಾಕು, ಗೂಡು ಬೇಡ ಅಂತಾನೆ. ಗೂಡು ಸೇರಬೇಕಾದ ಸಂಜೆ ಹೊತ್ತಿನಲ್ಲಿ ಸಂಪಾದನೇನ ಜಾಸ್ತಿ ಮಾಡಿಕೊಳೋಕೆ ಹೋಗತಾನೆ. ಕ್ಲಬ್‌ಗೆ ಹೋಗತಾನೆ. ಹೇಗಿದ್ದರೂ ಗೂಡು ಇದ್ದೇ ಇರುತ್ತೆ ಕಾಯಕೊಂಡು ಅನ್ನುವ ಅಹಂಕಾರ"- (ಪು.442) ಇದು ಕೆ. ಸತ್ಯನಾರಾಯಣ ಅವರ 'ಈ ತನಕದ ಕಥೆಗಳು' ಸಂಕಲನದ 'ಮಸಣದಿ ಪೇಳಿಕೊಂಡ ಮಗನ ಕತೆ'ಯ ಕೊನೆಯಲ್ಲಿ ಬರುವ ಸಾಲುಗಳು. ಇವು ಈ ಸಂಕಲನದ ಎಲ್ಲ ಕಥೆಗಳಿಗೆ ಒಂದು ವ್ಯಾಖ್ಯೆಯಂತಿವೆ. ಇವು ನಮ್ಮ ಸದ್ಯದ ಸಮಕಾಲೀನ ಸಾಂಸ್ಕೃತಿಕ ಪರಿಸರ ಎದುರಿಸುತ್ತಿರುವ ನವವಸಾಹತುಶಾಹಿ ವಿರುದ್ಧ ದೇಶೀಯತೆಯ ವ್ಯಾಖ್ಯೆಯೂ ಆಗಬಹುದು. ಹಾಗೂ ಪಿತೃಪ್ರಧಾನ ವ್ಯವಸ್ಥೆಯ ಎದುರಾಗಿ ನಿಂತಿರುವ ಲಿಂಗಭೇದದ ಬಿಕ್ಕಟ್ಟಿಗೆ ಬರೆದ ವ್ಯಾಖ್ಯೆ ಕೂಡ ಆಗಬಹುದು.

> **ಈ ತನಕದ ಕಥೆಗಳು**
> (ಮುದ್ರಣ: 2006)
> ಲೇ : ಕೆ. ಸತ್ಯನಾರಾಯಣ
> ಪ್ರ : ಗೀತಾಂಜಲಿ ಪಬ್ಲಿಕೇಷನ್ಸ್, ಬೆಂ.
> ಪುಟ: 550, ಬೆಲೆ: 300/– ರೂ.

ಕೌಟುಂಬಿಕ ಮೌಲ್ಯಗಳನ್ನು ಇನ್ನಿಲ್ಲದಂತೆ ತೆರೆದಿಡುವ ಈ ಸಂಕಲನದಲ್ಲಿ ನನಗೆ ಲಿಂಗ ಭೇದದ ನೆಲೆಯೇ ಹೆಚ್ಚು ಮುಖ್ಯವೆನಿಸುವುದು. ಗೂಡನ್ನು ಗಂಡು ಹೆಣ್ಣು ಹಕ್ಕಿಗಳು ಸೇರಿ ಕಟ್ಟುತ್ತವೆ. ಕಟ್ಟಿದನಂತರ ಒಂದು ಹಕ್ಕಿ ಗೂಡನ್ನು ಪೋಷಿಸಿದರೆ ಇನ್ನೊಂದು ಹೊರಗೆ ಹೋಗಿ ಕಾಳನ್ನು ಹೆಕ್ಕಿತರುತ್ತದೆ. ಗೂಡು ಉಳಿಯಬೇಕಾದರೆ ಹೊರಗೆ ಹೋಗುವುದು ಅನಿವಾರ್ಯ. ಆದರೆ ಹಾಗೆ ಹೊರಗೆ ಹೋಗುವುದಾದರೆ ಏತಕ್ಕೆ? ಮತ್ತೆ ಮರಳಿ ಬರಲಿಕ್ಕೆ, ಗೂಡನ್ನು ಪೋಷಿಸಲಿಕ್ಕೆ.

ಮನುಷ್ಯರಲ್ಲಿ ಗಂಡಿನದು ಗೂಡು ಕಟ್ಟುವ ಕೆಲಸವಾದರೆ, ಹೆಣ್ಣಿನದು ಗೂಡನ್ನು ರೂಪಿಸುವ ಕೆಲಸ, ಅದನ್ನು ಪೋಷಿಸುವ ಕೆಲಸ. ಗೂಡು ಎನ್ನುವುದು ಒಂದು ಇರುವುದಾದರೆ ಅದರ ಹೊರಗೆ ಪ್ರಪಂಚ ಎನ್ನುವುದೂ ಇದೆ. ಮನುಷ್ಯ ನಿಸರ್ಗದಿಂದ ದೂರವಾಗುತ್ತಾ ಪಿತೃಪ್ರಧಾನ ವ್ಯವಸ್ಥೆಯೊಳಗೆ ತನ್ನನ್ನು ರೂಪಿಸಿಕೊಳ್ಳುತ್ತಾ ಹೋದಂತೆ ಈ ಗೂಡು ಮತ್ತು ಪ್ರಪಂಚಗಳ ನಡುವಿನ ಅಂತರ ಹೆಚ್ಚಾಗುತ್ತಾ ಬಂದಿರುವುದು ಚರಿತ್ರೆಯಲ್ಲಿ ಸರ್ವವಿದಿತ. ಇದಕ್ಕೆ ಕಾರಣವೆಂದರೆ, ಗೂಡಿನ ಹೊರಗಿನ ಪ್ರಪಂಚ ಕಾಲದ ವೇಗಕ್ಕೆ ಬದಲಾದ ಹಾಗೆ ಗೂಡು ಬದಲಾಗಲಿಲ್ಲ. ಅನಂತಮೂರ್ತಿಯವರು ಒಮ್ಮೆ, ಭಾರತದಂತಹ ದೇಶದಲ್ಲಿ ಒಂದೇ ಕಾಲದಲ್ಲಿ ಎಲ್ಲಾ ಶತಮಾನಗಳು ಜೀವಿಸಿರುತ್ತವೆ ಎಂದು ಹೇಳಿದ್ದರು. ಅವರ ಮಾತು ಗೂಡಿನ ಹೊರಗಿನ ಪ್ರಪಂಚಕ್ಕಿಂತ ಒಳಗಿನ ಪ್ರಪಂಚಕ್ಕೆ ಅನ್ವಯವಾಗುತ್ತದೆ. ಗೂಡಿನ ಹೊರಗಿನ ಪ್ರಪಂಚ ಇಪ್ಪತ್ತೊಂದನೆಯ ಶತಮಾನದಲ್ಲಿ ದೌಡಾಯಿಸುತ್ತಾ ಇದ್ದರೆ, ಗೂಡಿನೊಳಗೆ ಸನಾತನವೆಂಬ ನಿರ್ದಿಷ್ಟ ಕಾಲದ ಗಡಿರೇಖೆಗಳಿಲ್ಲದ ಎಷ್ಟೋ ಶತಮಾನಗಳು ದೇವರ ಗೂಡಿನಲ್ಲಿ ಗಂಟೆ ಬಾರಿಸುತ್ತಿರುತ್ತವೆ. ಗೂಡಿನೊಳಗಿನ ಲೋಕ ಪೆಡಸಾಗಿದ್ದರೆ (rigid), ಹೊರಗಿನ ಲೋಕ ನಮನಶೀಲವಾಗಿರುತ್ತದೆ (flexible). ಶಾಸ್ತ್ರ ಸಂಹಿತೆಗಳ ಆಧಾರದ ಮೇಲೆ ನಡೆಯುವ ಗೂಡಿಗೆ modify ಆಗುವ ಅನಿವಾರ್ಯತೆ ಇಲ್ಲ. ಯಾಕೆಂದರೆ ಪಿತೃಪ್ರಧಾನ ವ್ಯವಸ್ಥೆ ತನ್ನ ಅನುಕೂಲಗಳಿಗೆ ತಕ್ಕಂತೆ ಶಾಸನಗಳನ್ನು ರೂಪಿಸುವುದರಿಂದ ಅದಕ್ಕೆ ಬೇಕಾಗಿಯೂ ಇಲ್ಲ. ಪಿತೃಪ್ರಧಾನ ವ್ಯವಸ್ಥೆಯ ಲೋಕವೆಂದರೆ ಗೂಡಿನ ಹೊರಗಿನ ಲೋಕ. ಅದಕ್ಕೆ ಗೂಡಿನ ಲೋಕದ ಬಗೆಗೆ ಅಜ್ಞಾನವಿರುವಂತೆ, ಅವಜ್ಞೆಯೂ ಇದೆ.

ಹೆಣ್ಣು ತಾಯಿಯಾಗಿ ಮಗಳಾಗಿ ಹೆಂಡತಿಯಾಗಿ ಗೂಡೊಳಗೆ ಭೂತಕಾಲದೊಳಗೇ ನಿಂತುಬಿಟ್ಟರೆ, ಗಂಡು ವರ್ತಮಾನದಲ್ಲಿ ಗಿರಕಿ ಹೊಡೆಯುತ್ತಿರುತ್ತಾನೆ. ಹೀಗಾಗಿ ಗಂಡಿಗೂ ಹೆಣ್ಣಿಗೂ ಶತಶತಮಾನಗಳ ಅಂತರ. ಸದಾ ಎತ್ತು ಏರಿಗೆ ಇಳಿದರೆ ಎಮ್ಮೆ ನೀರಿಗಿಳಿಯುವ ಸಂಘರ್ಷ. ಹೆಣ್ಣು ಗೂಡಿನಿಂದ ಹೊರಗೆ ಇಣುಕುತ್ತಿರುವ ಈ ಕಾಲದಲ್ಲಂತೂ ಈ ಸಂಘರ್ಷಕ್ಕೆ ಇನ್ನೂ ತೀವ್ರತೆ ಹೆಚ್ಚು. ಅದಕ್ಕೆ ಬೆಲೆ ತೆರಬೇಕಾದವಳು ಅವಳೇ. ಈ ಸಂಘರ್ಷವನ್ನು ಶಶಿದೇಶಪಾಂಡೆಯವರು ತಮ್ಮ 'That Long Silence' ಕಾದಂಬರಿಯಲ್ಲಿ ಅದ್ಭುತವಾದ ಒಂದು ಪ್ರತಿಮೆಯ ಮೂಲಕ ಚಿತ್ರಿಸಿದ್ದಾರೆ. – "No, What I have to do with these mythical women? I can't fool my

self. The truth is simpler. Two bullocks yoked together... it is more comfortable for them to move in the same direction. To go in different directions would be painful: and what animal would voluntarily choose pain?" (pp.11-12). ಈ ಸಂಘರ್ಷಕ್ಕೆ ಕಾರಣ, ಹೊರಗಿನ ಲೋಕಕ್ಕೆ ಗೂಡಿನ ಪರಿವೆ ಪರಿಚಯ ಇಲ್ಲದಿರುವುದನ್ನು ಎತ್ತಿ ತೋರಿಸುತ್ತದೆ. ಗೂಡಿಗಿಂತ ಪ್ರಪಂಚಕ್ಕೇ ಹೆಚ್ಚಿನ ಪ್ರಾಧಾನ್ಯ. ಆದುದರಿಂದಲೇ ನಮ್ಮ ಸಂಸ್ಕೃತಿಯಲ್ಲಿ ಗೂಡಿನಿಂದಲೇ ಲೋಕವನ್ನು ವೀಕ್ಷಿಸಲಾಗಿದೆಯೇ ಹೊರತು, ಹೊರಗಿನಿಂದ ಗೂಡನ್ನು ವೀಕ್ಷಿಸಲಾಗಿಲ್ಲ. ಗೂಡಿನಿಂದ ಹೊರಗಿನ ಲೋಕವನ್ನು ನೋಡುವಾಗ ಅದು ಹೆಚ್ಚು ಆಕರ್ಷಕವಾಗಿ ಕಾಣುತ್ತದೆ. ಹೊರಗಿನದ್ದರ ಜಾಯಮಾನವೇ ಹಾಗೆ ತಾನೇ. ಆದುದರಿಂದಲೇ ಹೊರಗಿನ ಗಾಳಿ ಬೆಳಕುಗಳಿಗೆ ತೆರೆದುಕೊಳ್ಳದ ಗೂಡು ಬಂಧನವಾಗಿ ಕಾಣುತ್ತದೆ. ಮೂಗುಬ್ಬಸ ಪಡುತ್ತ ನರಳುತ್ತದೆ. ಗೂಡನ್ನು ಕಾಲದಿಂದ ಕಾಲಕ್ಕೆ ಪುನರ್ನವೀಕರಿಸಿಕೊಳ್ಳಲು ಸಾಧ್ಯವಾಗಿದ್ದರೆ ಪ್ರಪಂಚ ಮತ್ತು ಗೂಡುಗಳ ಅಂತರ ಇಷ್ಟು ಅಗಾಧವಾಗಿ ಬೆಳೆಯು ತ್ತಿರಲಿಲ್ಲ. ನಾವು ಗೂಡಿನ ಭೌತಿಕ ಆವರಣವನ್ನೇನೋ 21ನೆಯ ಶತಮಾನದ ಆಧುನಿಕ ಸಲಕರಣೆಗಳಿಂದ ಸಜ್ಜುಮಾಡಿಬಿಟ್ಟಿರಬಹುದು. ಆದರೆ ಅದರ ಮನೋಮಯ ಕೋಶವನ್ನಲ್ಲ, ಭಾವನಾ ಜಗತ್ತನ್ನಲ್ಲ. (ಈಗ ಹುಟ್ಟಿಕೊಳ್ಳುತ್ತಿರುವ ಮಹಿಳಾ ಚಳವಳಿಗಳು ಅಧ್ಯಯನಗಳು ಹೊರಗಿನಿಂದ ಗೂಡನ್ನು ನೋಡುವಂತಹ ಕೆಲಸವನ್ನು ಮಾಡುತ್ತಿವೆ.)

ಇದನ್ನು ಇಲ್ಲಿ ಹೇಳುವ ಕಾರಣವಿಷ್ಟೆ. ಸತ್ಯನಾರಾಯಣ ಅವರ 'ಈ ತನಕದ ಕಥೆಗಳಲ್ಲಿ' ಪ್ರಪಂಚದ ದೃಷ್ಟಿಯಿಂದ ಗೂಡನ್ನು ನೋಡುವ, ಅರ್ಥಮಾಡಿಕೊಳ್ಳುವ ಒಂದು ಕ್ರಿಯೆ ಆತ್ಮೀಯವಾಗಿ ಕಾಂತಾಸಂಹಿತೆ ಯಂತೆ ನಡೆಯುತ್ತದೆ. ಈ ಕಥೆಗಳಿಗೆ ಗೂಡೊಳಗಿನ ದುಡಿಮೆಯ ಕಲ್ಪನೆಯಿದೆ, ದುಡಿಮೆಯ ಏಕತಾನತೆಯಲ್ಲಿ, ವೈವಿಧ್ಯಗಳಿಲ್ಲದ ಯಾಂತ್ರಿಕತೆಯಲ್ಲಿ ಬದುಕುವ ಸೊರಗುವ ಸ್ವರೂಪದ ಪರಿಚಯವಿದೆ. ಇದರ ಗಾಳಿ ಬೆಳಕುಗಳಿಲ್ಲದ ಕತ್ತಲ ಪ್ರಪಂಚದ ಬಗೆಗೆ ತೀವ್ರ ಕಳಕಳಿಯಿದೆ. ಇಂತಹ ಒಂದು ಪರಿಚಯದಿಂದಲೇ, ಅದರ ಜ್ಞಾನ ದಿಂದಲೇ, ಅದರ ಬಗೆಗಿನ ಆಸ್ಥೆಯಿಂದಲೇ ಇಲ್ಲಿನ ಕಥೆಗಳು ಜೀವ ಪಡೆದಿವೆ. ಇಲ್ಲಿನ ಅನೇಕ ಕಥೆಗಳಲ್ಲಿ ಹೆಂಡತಿ, ತಾಯಿ, ಅಪರೂಪವಾಗಿ ಮಗಳು ಪ್ರತ್ಯಕ್ಷವಾಗಿ (ಕಥೆಯ ಬಂಧಕ್ಕೆ ಅದು ಅನಿವಾರ್ಯ ವಲ್ಲದಿದ್ದರೂ) ಕಥೆಯ ಪ್ರಾರಂಭಕ್ಕೆ ಚಾಲನೆಯನ್ನು ಕೊಡುತ್ತಾರೆ, ಮಧ್ಯೆ ಬಂದು ಮುನ್ನಡೆಸುತ್ತಾರೆ.

ಗೂಡು ಮತ್ತು ಪ್ರಪಂಚಗಳೆರಡರ ನಡುವಿನ ಅಂತರ ಸೃಷ್ಟಿಸುವ ವಿಕೃತಿಯ ಪ್ರತೀಕವಾಗಿ 'ಗ್ರಾಹೆಂಬೆಲ್...'ನ ಕತೆಯ ತಾಯಿ ಮತ್ತು 'ಸರ್ ಎಂ. ವಿಶ್ವೇಶ್ವರಯ್ಯ' ಕತೆಯ ಭಾಗಮ್ಮ ಬಂದರೆ, ಅವೆರಡೂ ಒಂದೊರಳಗೊಂದು ಹಾಸು ಹೊಕ್ಕಾಗಿ ಸೇರುವ ಪರಿಯನ್ನು ಅವರ 'ನನ್ನ ಸೊಸೆಯ ಕಾಮನಬಿಲ್ಲು' ಕತೆಯ ಅತ್ತೆ ಪ್ರತಿನಿಧಿಸುತ್ತಾಳೆ. ಗ್ರಾಹೆಂಬೆಲ್ ಕತೆಯ ತಾಯಿ ಮಧ್ಯರಾತ್ರಿ ಎದ್ದು ಬೊಂಬೆಗಳ ನಡುವೆ ಆಟವಾಡುವ ಮತ್ತು ಆಡಿಸುವ ಚಿತ್ರ ಮತ್ತು ಸರ್ ಎಂ.ವಿಶ್ವೇಶ್ವರಯ್ಯ ಕತೆಯ ಅರೆಮರುಳು ಭಾಗಮ್ಮ ಬೀಸೋ ಕಲ್ಲಿನ ಶಬ್ದದ ಜೊತೆ ಅಲವತ್ತುಕೊಳ್ಳುವುದರೊಂದಿಗೆ ಯಾರಿಗೂ ಕೇಳಬಾರದೆಂಬಂತೆ ಬೀಸೋಕಲ್ಲನ್ನು ಜೋರಾಗಿ ಬೀಸುತ್ತಾ ವಿಶ್ವೇಶ್ವರಯ್ಯನವರನ್ನು ನೋಡಿದ ಸಂಗತಿಯನ್ನು ಹೇಳೊಕೊಳ್ಳುವುದು ಇಂತಹ ವಿಕೃತಿಯ ಪ್ರತೀಕವೇ ಆಗಿದೆ. ಇದರ ಇನ್ನೊಂದು ತುದಿಯಲ್ಲಿ ಮಗನನ್ನು ಕಳೆದುಕೊಂಡ ಅತ್ತೆಯೇ ತನ್ನ ಸೊಸೆಗೆ ಬೇರೆ ಮದುವೆ ಮಾಡಿಸುವುದರ ಮೂಲಕ ಹೊಸ ಬದುಕೊಂದನ್ನು ನೀಡುತ್ತಾಳೆ. ಇಲ್ಲಿನ ಅತ್ತೆ ಹೆಣ್ಣಿನ ಸಿದ್ಧ ಮಾದರಿಗೆ ವ್ಯತಿರಿಕ್ತವಾಗಿರುವುದನ್ನು ತೋರಿಸುವುದಲ್ಲದೇ ಮನುಷ್ಯ ಸಂಬಂಧದ ಮಾನವೀಯ ನೆಲೆಯನ್ನೂ ಎತ್ತಿ ತೋರುತಾಳೆ. ಅತ್ತೆ ಇಲ್ಲಿ ಪ್ರಪಂಚದ ಪ್ರತೀಕವಾದರೆ, ಸೊಸೆ ಗೂಡಿನ ಪ್ರತೀಕ. ಕತ್ತಲೆಯ ಗೂಡಿನೊಳಗೆ ಆಕಾಶದ ಕಾಮನಬಿಲ್ಲು ಇಳಿದಿದೆ. ಗೂಡಿಗೆ ಹೊಸ ಸಾಧ್ಯತೆಯೊಂದನ್ನು ಇತ್ತುದರ ಪ್ರತೀಕವಾಗಿ ಕಾಮನಬಿಲ್ಲು ಧರೆಗಿಳಿದು ಬಂದಿದೆ. ಇದರ ಪಾರಸ್ಪರಿಕತೆಯನ್ನು ನಿರೂಪಕ ತನ್ನ ಕಣ್ಣುಗಳಲ್ಲಿ ತುಂಬಿಕೊಳ್ಳುವುದು. ಇಂತಹುದೊಂದು ಸಾಧ್ಯತೆಯ ಜೊತೆಗೆ ವಿಸ್ಮಯವೂ ಬೆರೆತಿರುವುದನ್ನು ಈ ಕತೆ ಬಯಲಾಗಿಸುತ್ತದೆ. ಇಂತಹುದೇ ಒಂದು ಪಾರಸ್ಪರಿಕತೆಯನ್ನು 'ಮಸಣದಿ ಪೇಳಿಕೊಂಡ' ಕತೆಯಲ್ಲಿ ಮುದುಕಪ್ಪ ಮತ್ತು ಆತನ ಹೆಂಡತಿಯ ಸಂಬಂಧದಲ್ಲಿ ಕಾಣಬಹುದಾಗಿದೆ. ಅರ್ಧರಾತ್ರಿಯಾದರೂ ಗಂಡ ಬಂದ ತಕ್ಷಣ ಆಕೆ ದೀಪ ಹಚ್ಚಿ ಕೈಮುಗಿಯುತ್ತಿದ್ದ ಚಿತ್ರ ಇಂತಹ ಸಂಬಂಧವೊಂದರ ಜೀವಂತ ಪ್ರತೀಕವಾಗಿ ಓದುಗರ ಕಣ್ಣ ಮುಂದೆ ನಿಲ್ಲುತ್ತದೆ.

ಗೂಡಿನೊಳಗೆ ಕತ್ತಲು ಮುಸುಕಿದ್ದು, ಹೊರಗಿನ ಬೆಳಕು ಕ್ರಮೇಣ ಪ್ರವೇಶಿಸುವ, ಮತ್ತು ಹೀಗೆ ಪ್ರವೇಶಿಸುವಾಗ ಕತ್ತಲು ಬೆಳಕಿನ ಸಂಘರ್ಷವನ್ನು, ಅದನ್ನು ಮೀರಿ ಹೊರಗೆ ಬರುವ ತಮ್ಮತನಕ್ಕೆ ಸಂಪೂರ್ಣ ಅರಳಿಕೊಳ್ಳುವ ಹೆಣ್ಣಿನ ವ್ಯಕ್ತಿತ್ವದ ವಿಕಾಸವನ್ನು ತಮ್ಮ ಅನೇಕ ಕಥೆಗಳ ಮೂಲಕ ಹಿಡಿದಿಟ್ಟಿದ್ದಾರೆ. ಇದು ಚರಿತ್ರೆಯ ವಿಕಾಸ ಕೂಡ ಹೌದು. ಅವರ ಪ್ರಾರಂಭದ ಕತೆಗಳಲ್ಲೆ ಇಂತಹ ಒಂದು ಮಹಿಳಾ ಲೋಕವನ್ನು ಗುರುತಿಸಬಹುದಾಗಿದೆ. 'ನಜೀರ ಸಾಬು ಚರಿತ್ರೆಯು' ಇದಕ್ಕೆ ಒಳ್ಳೆಯ ಉದಾಹರಣೆ.

ಹೆಣ್ಣಿನ ವ್ಯಕ್ತಿತ್ವ ವಿಕಾಸದ ಪರಿಯನ್ನು ಮೂರು ನೆಲೆಯಲ್ಲಿ ಗುರುತಿಸಬಹುದಾಗಿದೆ. ಒಂದು, ಮನೆಯೊಳಗಿದ್ದೂ ಸಾಂಪ್ರದಾಯಕ ಚೌಕಟ್ಟಿಗೆ ಅಂಟಿಕೊಂಡೂ ಅದರ ಬೇಡಿಕೆಗಳಿಗೆ ಮೌಲ್ಯಗಳಿಗೆ ಕ್ಯಾರೇ ಎನ್ನದೇ ತಮಗೆ ಅನ್ನಿಸಿದ್ದು ಸರಿ ಎಂಬ ಗಾಢ ನಂಬಿಕೆಯಲ್ಲಿ ಬದುಕುವವರು. ಎರಡನೆಯದು, ತಮ್ಮ ದುಡಿಮೆಯ ಮೂಲಕವೇ ತಮ್ಮ ಶಕ್ತಿಯನ್ನು ಬಯಲಾಗಿಸುವವರು. ಮೂರನೆಯದಾಗಿ ಪ್ರಜ್ಞಾಪೂರ್ವಕವಾಗಿ ಸ್ವಾತಂತ್ರ್ಯದ ಹಂಬಲದಿಂದ ಹೊರಜಗತ್ತಿಗೆ ಕಾಲಿಡುವವರು.

ಮೊದಲನೆಯದಕ್ಕೆ ಉದಾಹರಣೆ 'ಹೀಗೂ ಉಂಟೆ ಪ್ರೇಮದ ಶೈಲಿಯು, ಮತ್ತು 'ಇಳಿವಯಸ್ಸಿನ ಡೈವೋರ್ಸ್' ಕತೆಗಳು. ಮೊಮ್ಮಕ್ಕಳ ಜೊತೆ 'ಪುಣ್ಯಕೋಟಿ', 'ಮಾರ್ಕಂಡೇಯ'ನ ಕತೆ ಹೇಳಿಕೊಂಡು ಕಾಲ ಕಳೀಬೇಕಾಗಿದ್ದ ನಾಣಿಯ ತಾಯಿ, ನಿರೂಪಕನ ಚಿಕ್ಕಮ್ಮ ತನ್ನ ಗಂಡ ಸತ್ತ ಮೇಲೆ ಬಹಳ ಕಾಲ ಸಕೇಶಿಯಾಗಿದ್ದವಳು. ಇಳಿ ವಯಸ್ಸಿನಲ್ಲಿ ತನ್ನ ಸೊಸೆಯ ತಂದೆಯ ಸಾಹಚರ್ಯ ದೊರಕುತ್ತಲೇ ಅವಳ ಬರಡು ಬದುಕಿಗೆ ಹೊಸ ಜೀವ ಬಂದು ಬಿಡುತ್ತದೆ. ಹಣೆಗೆ ಕುಂಕುಮ ಇಟ್ಟುಕೋತಾಳೆ, ಹೂವು ಮುಡಕೋತಾಳೆ, ತರಕಾರಿ ಮಾರ್ಕೆಟ್ಟಿನಲ್ಲಿ, ಸಂಗೀತ ಕಛೇರಿ, ದೇವಸ್ಥಾನ ಹೀಗೆ ಎಲ್ಲೆಂದರಲ್ಲಿ ತನ್ನ ಸೊಸೆಯ ತಂದೆಯ ಜೊತೆ ಗಂಡನೆಂಬ ಹಕ್ಕಿನಿಂದ ಓಡಾಡುತ್ತಾಳೆ. ವಿಧವೆಯಾದ ಅವಳು ಯಾವುದೇ ವಿಧಿಪೂರ್ವಕ ಆಚರಣೆಗೂ ಒಳಗಾಗದೇ ವಾಣಿಯ ತಂದೆಯ ಜೊತೆ live in ಸಂಬಂಧವನ್ನು ಇಟ್ಟುಕೊಂಡು ಬದುಕುತ್ತಾಳೆ. ಆ ಬದುಕಿನಲ್ಲಿ ರೇಷ್ಮೆಸೀರೆ, ಹೂವು, ಅರಿಸಿನ ಕುಂಕುಮ, ಒಡವೆ ವಸ್ತ್ರದ ಸಂಭ್ರಮವಿದೆ. ಅವಳಿಗೆ ಈ ಶಕ್ತಿ ಬಂದುದು ಎಲ್ಲಿಂದ ಎಂಬುದು

ತಿಳಿಯದೇ ಹೋದರೂ ಇಂತಹ ಪಾತ್ರವೊಂದು ನಿರ್ವಹಿಸುವುದನ್ನು ಬಹಳ ಮೆಲುದನಿಯಲ್ಲೇ ಲೇಖಕರು ಸಹಜವೆನ್ನುವಂತೆ ಪಾಲಿಸುವುದು ಮಹತ್ವದ್ದಾಗಿ ಕಾಣುತ್ತದೆ. ಮತ್ತು ಲೇಖಕರ ನಿಲುವೂ ಸ್ಪಷ್ಟವಾಗುತ್ತದೆ.

'ಇಳಿವಯಸ್ಸಿನ ಡೈವೊರ್ಸ್' ಕತೆಯಲ್ಲಿ ಕೂಡ ನಂದಿನಿ ಮೇಡಂ ತನ್ನ ಬದುಕಿನ ಸರ್ವಸ್ವವಾಗಿದ್ದ ಮಗನನ್ನ, ತಾನೇ ಆರಿಸಿ ತಂದ ಸೊಸೆಯನ್ನು ಬಿಟ್ಟು (ಡೈವೊರ್ಸ್ ಕೊಟ್ಟು) ರಮಣ ಮಹರ್ಷಿಗಳ ಆಶ್ರಮ ಸೇರಿಕೊಳ್ಳುತ್ತಾಳೆ. ಶ್ರೀಮಂತ ಹಾಗೂ ವಿಲಾಸಿಯಾದ ಗಂಡನಿಗೆ, ಅವನ ಹುಚ್ಚು ಅಣ್ಣನ ಕಾಟದಿಂದ ತಪ್ಪಿಸಿಕೊಳ್ಳಲಿಕ್ಕೆ ಎಂದೋ ಡೈವೊರ್ಸ್ ಕೊಡಬೇಕಾಗಿದ್ದ ಅವಳು ತನ್ನ ಇಳಿವಯಸ್ಸಿನಲ್ಲಿ ವಿಚ್ಛೇದನ ಪಡೆದುಕೊಂಡು ಆಶ್ರಮ ಸೇರುತ್ತಾಳೆ. ಊರವರ ಅಸಮಾಧಾನಕ್ಕೆ ಕಾರಣಳಾಗುತ್ತಾಳೆ. ಊರ ಜನ ಅವಳ ಬದುಕಿನ ಯಶಸ್ಸನ್ನು, ಸಂತೋಷವನ್ನು ಅವಳ ಹಣ ಅಂತಸ್ತು ಒಡವೆಗಳಿಂದ ಅಳೆದರೆ, ಅವಳ ಯಶಸ್ಸು ಮತ್ತು ಸಂತೋಷದ ಮಾನದಂಡವೇ ಬೇರೆಯಾಗಿರುತ್ತದೆ. ಊರಿನವರ ಜೊತೆಗೆ ತಾನು ಕಷ್ಟಪಟ್ಟು ಸಾಕಿ ಸಲಹಿದ ಮಗನೂ ಸೇರಿಕೊಂಡಾಗ ಭ್ರಮ ನಿರಸನಗೊಂಡು ಅವಳು ಆಶ್ರಮ ಸೇರುತ್ತಾಳೆ. ಸಾಮುದಾಯಿಕ ನಂಬಿಕೆಯ ವಿರುದ್ಧ ಅವಳ ವೈಯಕ್ತಿಕ ಆಯ್ಕೆಯ, ಸ್ವಾತಂತ್ರ್ಯದ ಪರವಾಗಿ ನಿರೂಪಕ ನಿಲ್ಲುವುದು, ಒಂದು ವಸ್ತುನಿಷ್ಠ ದೂರದಲ್ಲಿ ನಿಂತು ಅದರ ಕತೆ ಹೇಳುವುದು ಇದರ ಇತ್ಯಾತ್ಮಕ ಅಂಶವಾಗಿದೆ.

ಎರಡನೆಯ ಮಾದರಿಗೆ ಉದಾಹರಣೆಯೆಂದರೆ–'ಇನ್ನೊಂದು ಸೈಕಲ್ ಸಾಕು' ಕತೆಯ ಕುಸುಮ. ಇವಳಿಗೆ ಬುಧವಾರದಿಂದ ಶುಕ್ರವಾರದವರೆಗೆ ಗಂಡ ಮಕ್ಕಳ ಊಟ ತಿಂಡಿ ಕ್ಯಾರಿಯರ್, ನೀರು ಹಿಡಿಯುವ, ಶಾಲೆಗೆ ಹಾಜರಾಗುವ ಕೆಲಸದ ಜೊತೆಗೆ ಸೈಕಲ್ ಇಲ್ಲದಾಗ ಬಸ್ಸು ಹಿಡಿಯುವ ಕೆಲಸ. ಅವಳ ಹೊರಗಿನ ದುಡಿಮೆ, ಮೈಲುಗಟ್ಟಲೆ ಸೈಕಲ್ ತುಳಿದು ಶಾಲೆಗೆ ದುಡಿಯಲು ಹೋಗುವ ಹುಮ್ಮಸ್ಸು, ಈ ಎಲ್ಲವೂ ಒಂದು ರಿಚುಯೆಲ್ ಎನ್ನುವಂತೆ ದಾಖಲುಗೊಂಡಿದೆ. 'ಸದ್ಯಕ್ಕೆ ಇನ್ನೊಂದು ಸೈಕಲ್ ತೆಗೆದುಕೊಳ್ಳಬೇಕೆಂಬುದು ಅವಳ ಕನಸು. ವಾರದ ಮೂರು ದಿನಗಳಲ್ಲಿ ಅವಳ ಸೈಕಲ್‌ಅನ್ನು ಅವಳ ಮಗ ತೆಗೆದುಕೊಂಡು ಹೋಗಿಬಿಡುವುದರಿಂದ ಅವಳು ಸೈಕಲ್ಲಿನಿಂದ ವಂಚಿತಳಾಗುತ್ತಾಳೆ. ಅವಳ ದುಡಿಮೆಯ ಬಗೆಗಿನ ಪ್ರೀತಿಯ ಪ್ರತೀಕ ಈ ಸೈಕಲ್. ಕೆಳಮಧ್ಯಮವರ್ಗದ ಅವಳಿಗೆ ಸೈಕಲ್ಲಿನ ಕನಸು ಮಾತ್ರ ಕಾಣಲು ಸಾಧ್ಯವಿದೆ. ಇದು ಸ್ವಾತಂತ್ರ್ಯದ ಪ್ರತೀಕ ಕೂಡ. ಅವಳ ಈ ಸ್ವಾತಂತ್ರ್ಯದ ಪ್ರೀತಿಯನ್ನು, ಮನೆಯಾಚೆಯ ದುಡಿಮೆಯ ಪ್ರೀತಿಯನ್ನು **"ಮತ್ತೆ ಸೈಕಲ್ ಹತ್ತಿ ಪೆಡಲ್ ಒತ್ತಿದರೆ ಕುಸುಮಳಿಗೆ ಅದೆಷ್ಟೋ ಖುಷಿ. ಮಾಗಡಿ ಕ್ರಾಸ್, ಹೊಸಹಳ್ಳಿ ರಸ್ತೆ, ಎಲ್ಲವೂ ಒಂದರ ಹಿಂದೆ ಒಂದು ಬಂದು ಹಿಂದೆ ಹೋಗುತ್ತಲೇ ಇರುತ್ತದೆ. ಅವಳಿಗೆ ಅದು ಯಾವುದೂ ಗೊತ್ತಾಗುವುದಿಲ್ಲ. ಅವಳಾಯಿತು, ಅವಳ ಸೈಕಲ್ ಸವಾರಿಯಾಯಿತು. ಅಷ್ಟೊಂದು ಏಕಾಗ್ರತೆ, ಅಷ್ಟೊಂದು ತನ್ಮಯತೆ ಅವಳದು. ಎಷ್ಟೆಂದರೆ ಸೈಕಲ್ ಹೊಡೆಯುತ್ತಿರುವ ವ್ಯಕ್ತಿ ತಾನೇ ಎಂಬುದು ಕೂಡ ತಿಳಿಯದಷ್ಟು. ಆದರೂ ಅವಳ ಏದುಸಿರು ಮಾತ್ರ ಅವಳಿಗೆ ಆಗಾಗ್ಗೆ ಕೇಳಿಸುತ್ತಿರುತ್ತದೆ."** ಈ ಸಾಲುಗಳು ಬಹಳ ಮಾರ್ಮಿಕವಾಗಿ ವ್ಯಕ್ತಪಡಿಸುತ್ತವೆ. ಇದು ಅವಳನ್ನು victim mode ನಿಂದ survivor mode ಗೆ ದಾಟಿಸಿದೆ. ಆದುದರಿಂದಲೇ ಅವಳೀಗ ಸ್ವತಂತ್ರಹೆಣ್ಣು. ಆ ಸ್ವಾತಂತ್ರ್ಯವನ್ನು ತಂದುಕೊಟ್ಟಿರುವುದು ದುಡಿಮೆಯ ಸಾಧನವಾಗಿರುವ ಸೈಕಲ್. ದುಡಿಮೆ ಮಾತ್ರ ಹೆಣ್ಣಿಗೆ ಸ್ವಾತಂತ್ರ್ಯ ತಂದುಕೊಡಬಲ್ಲುದು ಎಂಬುವನ್ನೂ ಇದು ಸಾರುತ್ತದೆ. ಅಲ್ಲದೆ ಈ ಸೈಕಲ್ ತನಗೆ ಇಷ್ಟ ಬಂದ ರೀತಿಯಲ್ಲಿ, ತನ್ನದೇ ಸಮಯಕ್ಕೆ, ಯಾವ ನಿರ್ಬಂಧವೂ ಇಲ್ಲದಂತೆ ಚಲಿಸುವ ಸ್ವಾತಂತ್ರ್ಯವನ್ನೂ ದೊರಕಿಸಿಕೊಟ್ಟಿದೆ.

ಮೂರನೆಯ ಮಾದರಿಗೆ ಉದಾಹರಣೆಗಳೆಂದರೆ 'ನಜೀರ ಸಾಬು ಚರಿತ್ರೆ,' 'ಮಿಸೆಸ್ ಡೆತ್ ಅಮ್ಮನ ಸಾವು', ಮತ್ತು 'ನಡೆಯುತ್ತಿತ್ತ; ಕತೆ, ಬೆಳೆಯುತ್ತಿತ್ತ' ಕತೆಗಳನ್ನು ನೋಡಬಹುದು. ನಜೀರ್ ಸಾಬು ಚರಿತ್ರೆಯ ಸೀತಾಲಕ್ಷ್ಮಿ, ಮಿಸೆಸ್ ಡೆತ್ ಅಮ್ಮ ಈ ಇಬ್ಬರೂ ಸಾರ್ವಜನಿಕ ಬದುಕಿನಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಅವರಿಬ್ಬರೂ ಉಡುವ ಗರಿಗರಿ ಗಂಜಿ ಹಾಕಿದ ಸೀರೆಗಳಲ್ಲಿ ಓಡಾಡುವ ಚಿತ್ರಣವೇ ಒಂದು ರೀತಿಯ librated ಆದ feelingನ್ನು ಕೊಡುತ್ತದೆ. ಈ ಇಬ್ಬರೂ ಕೂಡ ಸ್ವಾತಂತ್ರ್ಯದ ಗಾಳಿಯನ್ನು ಉಸಿರಾಡುವವರು. ಸೀತಾಲಕ್ಷ್ಮಿ ಕೊನೆಗೆ ಗರ್ಭಕೋಶದ ರೋಗಕ್ಕೆ ತುತ್ತಾದರೆ, ಎಲ್ಲರ ಸಾವಿನಲ್ಲೂ ಹಾಜರಿಯಾಗುತ್ತಿದ್ದ, ಸತ್ತವರ ಮನೆಗೆ ಸಾಂತ್ವನ ನೀಡುತ್ತಿದ್ದ ಮಿಸೆಸ್ ಡೆತ್ ಅಮ್ಮ ಅವಳ ಸಾವಿನಲ್ಲೇ ಜನರ ಅಲಕ್ಷ್ಯಕ್ಕೆ ಗುರಿಯಾಗುತ್ತಾಳೆ. ಈ ಎರಡೂ ಪಾತ್ರಗಳ ಯಶಸ್ಸಿನ ಮುಂದೆ, ಸೀತಾಲಕ್ಷ್ಮಿಯ ಗಂಡನಾಗಲೀ, ಮಿಸೆಸ್ ಡೆತ್ ಅಮ್ಮನ ಕತೆಯ ಊರ ಜನರಾಗಲೀ ನಿಷ್ಕ್ರಿಯರಾಗಿ ಕಾಣಿಸುತ್ತಾರೆ. ಈ ಪಾತ್ರಗಳ ವೈಭವವನ್ನು ಕೂಡ ಲೇಖಕರು ಲಘುವಾಗಿ ಅಭಿವ್ಯಕ್ತಿಸುವುದು ಈ ಕತೆಗಳ ವೈಶಿಷ್ಟ್ಯವೇ ಆಗಿದೆ. 'ಕತೆ ನಡೆಯುತ್ತಿತ್ತ ಬೆಳೆಯುತ್ತಿತ್ತ' ಕತೆಯ ಅಂಬಿಕಾ ಕೂಡ ಇವರಂತೆಯೇ ಸ್ವಾತಂತ್ರ್ಯದ ಗಾಳಿಯನ್ನು ಉಸಿರಾಡುವವಳು. ಅವಳು ಕತೆಯ ಕೊನೆಗೆ ಸೈಕಲ್ ಓಡಿಸುವ ಚಿತ್ರ ಕುಸುಮಳ ಸ್ವಾತಂತ್ರ್ಯದ ಹಂಬಲದ ಪ್ರತೀಕವೇ ಆಗಿದೆ.

ಈ ಎಲ್ಲ ಕತೆಗಳನ್ನು ಓದಿದಮೇಲೆ ಈ ಪಾತ್ರಗಳು ಮಾತನಾಡುವುದಿಲ್ಲವಲ್ಲ, ಅವು ಮಾತನಾಡಿದ್ದರೆ ಎಷ್ಟು ಚೆನ್ನಾಗಿತ್ತು ಎನಿಸುತ್ತದೆ. ಇಲ್ಲಿ ಚಿಕ್ಕಮ್ಮನ, ಸೀತಾಲಕ್ಷ್ಮಿಯ, ಡೆತ್ ಅಮ್ಮನ ದ್ವಂದ್ವಗಳಾಗಲೀ, ತಾಕಲಾಟಗಳಾಗಲೀ ವ್ಯಕ್ತವಾಗುವುದಿಲ್ಲ. ನಿರೂಪಕನೇ ಅವರ ಮೂಲಕ ಮಾತನಾಡುವುದರಿಂದ ಅವರಿಗೇ ಏನನ್ನಿಸುತ್ತದೆ ಎಂಬುದು ತಿಳಿಯುವುದಿಲ್ಲ. ಭಾಗಮ್ಮ ಹಾಗೂ ಗ್ರಾಹೆಂಬೆಲ್ ಕತೆಯ ಮುದುಕಿಯರಾದರೂ ಅವರೊಳಗಿನ ತಾಕಲಾಟವನ್ನು ತಮ್ಮ ವಿಚಿತ್ರ ಕ್ರಿಯೆಗಳ ಮೂಲಕ, ನಂದಿನಿ ಮೇಡಂ ಸ್ವಲ್ಪ ಮಟ್ಟಿಗೆ ಪತ್ರ ಮುಖೇನ ಹೊರಹಾಕುತ್ತಾರೆ. ಆದರೆ ಉಳಿದ ಪಾತ್ರಗಳಲ್ಲಿ ಅದು ಕಾಣಿಸುವುದಿಲ್ಲ. ಅವರ ಮುಂದಿನ ಕತೆಗಳಲ್ಲಿ ಪಾತ್ರಗಳ ಮಾತುಗಳ ಮೂಲಕ ಈ ಕಾಣ್ಕೆಗೆ ಕಣ್ಣು ಬರಲಿ ಎಂದು ಹಾರೈಸುತ್ತೇನೆ. ❑

---

*ಈ ಸಂಚಿಕೆಯ ಪ್ರಾಯೋಜಕರು:*

**ಡಿ.ಎಸ್. ಸುರೇಶ್**

ಸಾಕ್ಷ್ಯಚಿತ್ರ ತಯಾರಕರು, ಬೆಂಗಳೂರು

---




# ಭಾರತೀಯ ಸ್ತ್ರೀವಾದದ ಮುಂದಿರುವ ಸವಾಲುಗಳು

● ಬಿ.ಎನ್. ಉಷಾ

ಸುಧಾ ಅವರ 'ಮಹಿಳಾ ಅಧ್ಯಯನ-ಸಮಾಜಶಾಸ್ತ್ರೀಯ ದೃಷ್ಟಿಕೋನ' ಪುಸ್ತಕವು ಮಹಿಳಾ ಅಧ್ಯಯನ, ಸ್ತ್ರೀವಾದ ಹಾಗೂ ಮಹಿಳಾ ಚಳವಳಿ ಕುರಿತು ವಿದ್ಯಾರ್ಥಿಗಳಿಗೆ ಹಾಗೂ ಈ ವಿಚಾರಗಳ ಬಗ್ಗೆ ಆಸಕ್ತಿ ಇರುವ ಯಾರಿಗೇ ಆಗಲಿ ಒಂದು ಉತ್ತಮ ಪ್ರವೇಶಿಕೆಯಾಗಿದೆ. ಸಮಾಜಶಾಸ್ತ್ರ, ಮಹಿಳಾ ಅಧ್ಯಯನ, ಸ್ತ್ರೀವಾದಿ ಚಳವಳಿಗಳ ಸೈದ್ಧಾಂತಿಕ ಹಾಗೂ ತಾತ್ತ್ವಿಕ ನೆಲೆಗಳನ್ನು ಪರಿಚಯಿಸುತ್ತದೆ. ಭಾರತ ಹಾಗೂ ಪಶ್ಚಿಮದಲ್ಲಿ ಸ್ತ್ರೀವಾದಿ ಚಿಂತನೆ ಹಾಗೂ ಮಹಿಳಾ ಅಧ್ಯಯನಗಳು ನಡೆದು ಬಂದ ದಾರಿ, ನಡೆಸಿದ ಪ್ರಮುಖ ಹೋರಾಟಗಳು ಹಾಗೂ ವಾದಗಳ ಬಗ್ಗೆ ಓದುಗರಿಗೆ ತಿಳಿಸುತ್ತದೆ. ಸ್ತ್ರೀವಾದ ಎಂಬುದು ಏಕರೂಪಿಯಾದ, ಸಾರ್ವತ್ರಿಕವಾದ ಹಾದಿಯಲ್ಲ, ಅದು ಅನೇಕ ದೇಶಗಳಲ್ಲಿನ ಸ್ಥಳೀಯತೆ, ಬೌದ್ಧಿಕ ಸಂವಾದಗಳಿಂದ ರೂಪಿತವಾದ, ಸಂಕೀರ್ಣವಾದ, ಅನೇಕ ವಿಚಾರ ಧಾರೆಗಳು ಹಾಗೂ ಹೋರಾಟಗಳಿಂದ ಹೊರಬಂದ ಸಿದ್ಧಾಂತವಾಗಿದೆ. ಸ್ತ್ರೀವಾದದ ಈ ಸಂಕೀರ್ಣತೆಯನ್ನು ಪುಸ್ತಕವು ಸಮರ್ಪಕವಾಗಿ ಓದುಗರಿಗೆ ಮುಟ್ಟಿಸುತ್ತದೆ. ಮಹಿಳಾ ಚಳವಳಿ ಹಾಗೂ ಮಹಿಳಾ ಅಧ್ಯಯನಗಳು ತನ್ನ ಲಿಂಗ ಸಂವೇದನೆಯ ದೃಷ್ಟಿಕೋನದ ಮೂಲಕ ಸಮಾಜಶಾಸ್ತ್ರವೂ ಒಳಗೊಂಡಂತೆ ಜ್ಞಾನ ಶಾಖೆಗಳ ದಿಕ್ಕನ್ನು ಬದಲಾಯಿಸಿದ್ದನ್ನು ಮಹಿಳಾ ಅಧ್ಯಯದ ಬೆಳವಣಿಗೆ ಹಾಗೂ ಸಮಾಜಶಾಸ್ತ್ರ ಮತ್ತು ಸ್ತ್ರೀವಾದಿ ನೆಲೆಗಳು ಅಧ್ಯಾಯಗಳಲ್ಲಿ ಸುಧಾ ಚರ್ಚಿಸುತ್ತಾರೆ.

ಸ್ತ್ರೀವಾದಿ ಸಿದ್ಧಾಂತದ ಮೂಲಭೂತ ಪರಿಕಲ್ಪನೆಗಳಾದ ಸಾಮಾಜಿಕ ಲಿಂಗ (ಜೆಂಡರ್) ಹಾಗೂ ಜೈವಿಕ ಲಿಂಗ (ಸೆಕ್ಸ್)ಗಳ ಬಗ್ಗೆ ಪರಿಚಯಿಸುತ್ತ ಸಾಮಾಜಿಕ ಹಾಗೂ ಜೈವಿಕ ಲಿಂಗಗಳ ಬೈನರಿಯಾಚೆ ಅವುಗಳನ್ನು ಅರ್ಥೈಸುವ ವಾದಗಳನ್ನು, ಸಾಮಾಜಿಕ ಹಾಗೂ ಜೈವಿಕ ಲಿಂಗಗಳೆರಡೂ ಸಾಮಾಜಿಕ ಸಂರಚನೆಗಳೆ ಎಂಬ ವಿಚಾರವನ್ನು ಸುಧಾ ತಮ್ಮ ಪುಸ್ತಕದ ಮೊದಲ ಅಧ್ಯಾಯದಲ್ಲಿ ಸೂಕ್ತವಾಗಿ ಪರಿಚಯಿಸುತ್ತಾರೆ. ಲೈಂಗಿಕ ಅಲ್ಪಸಂಖ್ಯಾತರ ಬಗ್ಗೆ ಕನ್ನಡದಲ್ಲಿ ಹಲವಾರು ಪುಸ್ತಕಗಳು ಹೊರಬಂದಿದ್ದರೂ, ಈ ವಿಚಾರಗಳ ಬಗ್ಗೆ ತಾತ್ತ್ವಿಕವಾಗಿ ವಿವರಿಸುವ ಪುಸ್ತಕಗಳು ನಮ್ಮಲ್ಲಿ ವಿರಳ. ಹೀಗಾಗಿ ಈ ಪುಸ್ತಕವು ಮಹಿಳಾ ಅಧ್ಯಯನ, ಮಹಿಳಾ ಚಳವಳಿಯ ಆಗು ಹೋಗುಗಳಲ್ಲದೆ ಅವುಗಳನ್ನು ರೂಪಿಸಿರುವ ವೈಚಾರಿಕ ಹಾಗೂ ಸೈದ್ಧಾಂತಿಕ ನೆಲೆಗಳನ್ನು ವಿವರಿಸುತ್ತದೆ. ಪ್ರತಿ ವೈಚಾರಿಕ ನೆಲೆಯಲ್ಲಿಯೂ ಇರುವ ಬಿಕ್ಕಟ್ಟನ್ನೂ ತಿಳಿಸುತ್ತ ಒಟ್ಟಾರೆ ಸ್ತ್ರೀವಾದಿ ವೈಚಾರಿಕಧಾರೆಗಳು, ಪರಿಕಲ್ಪನೆಗಳು, ವಿದ್ಯಮಾನಗಳನ್ನು ಸಮಗ್ರವಾಗಿ ಗ್ರಹಿಸಲು ಪುಸ್ತಕ ಸಹಾಯಕವಾಗಿದೆ. ಸ್ತ್ರೀವಾದಿ ಚಳವಳಿಯು ಮಹಿಳೆಯರ ಮೂಲಭೂತ ಹಕ್ಕುಗಳು, ಪ್ರಭುತ್ವ, ಲೈಂಗಿಕತೆ, ಕಾನೂನು, ಹಿಂಸೆ ಕುರಿತಾಗಿ ನಡೆಸಿದ ಹೋರಾಟಗಳು, ಮಹಿಳಾ ಅಧ್ಯಯನ ರೂಪುಗೊಂಡ ರೀತಿಗಳ ಬಗ್ಗೆ ಐತಿಹಾಸಿಕ ನೋಟ ಬೀರುವಾಗ, ಪಾಶ್ಚಿಮಾತ್ಯದಲ್ಲಿ 1960ರಲ್ಲೇ ಮಹಿಳೆಯರಿಗಾಗಿ ಬಂದ ಕುಟುಂಬ ಯೋಜನೆಯ ಗರ್ಭ ನಿರೋಧಕಗಳಿಂದ ಹಿಡಿದು ಭಾರತದಲ್ಲಿ 2004ರಲ್ಲಿ ತಿರುಪತಿಯಲ್ಲಿ 5ನೇ ಮಹಿಳಾ ಚಳವಳಿಯ ಸಮ್ಮೇಳನದಲ್ಲಿ ಲೆಸ್ಬಿಯನ್ ಮಹಿಳೆಯರು ಕೇಳಿದ ಪ್ರಶ್ನೆಗಳವರೆಗೂ ಈ ಪುಸ್ತಕ ಮಾತನಾಡುತ್ತದೆ. ಆದುದರಿಂದಲೇ ಸ್ತ್ರೀವಾದಿ ರಾಜಕೀಯವು ಪೂರ್ವ ನಿರ್ಧಾರಿತವಾದುದಲ್ಲ, ಅದು ಪ್ರತಿಹಂತದಲ್ಲೂ ಆ ಕಾಲಘಟ್ಟದ ಪ್ರಸ್ತುತ ಪ್ರಶ್ನೆಗಳಿಗೆ ತೆರೆದುಕೊಂಡು, ಬೆಳೆದು ಬಂದಂತಹ ಹಾದಿಯಾಗಿದೆ. ಸ್ತ್ರೀವಾದ ಒಂದು ಸದಾ ಸಂವೇದನಾಶೀಲವಾದಂತಹ ವೈಚಾರಿಕ ಧಾರೆಯಾಗಿದೆ. ಹೀಗಾಗಿ ಅದರ ಬಗ್ಗೆ ಮಾತನಾಡುವಾಗ ಏಕರೂಪತೆ ಸಲ್ಲದು. ಪಾಶ್ಚಿಮಾತ್ಯೇತರ ದೇಶಗಳಲ್ಲಿ ಸ್ತ್ರೀವಾದದ ಚರ್ಚೆಗಳು ವಿಶಿಷ್ಟವಾದ ರೂಪಗಳನ್ನು ತಾಳಿದ್ದು, ಸ್ತ್ರೀವಾದದೊಳಗಿನ ವಿರೋಧಾಭಾಸ ಹಾಗೂ ದ್ವಂದ್ವಗಳನ್ನೂ ಅವು ವಿಮರ್ಶಿಸುತ್ತಾ ಬಂದಿವೆ.

ಮೊದಲ ಅಧ್ಯಾಯಗಳು ಮಹಿಳಾ ಅಧ್ಯಯನ ಹಾಗೂ ಮಹಿಳಾ ಚಳವಳಿಯ ಆಗುಹೋಗುಗಳು, ಪ್ರಮುಖ ವೈಚಾರಿಕ ಧಾರೆಗಳನ್ನು ಕುರಿತದ್ದಾದರೆ, ಕೊನೆಯ ಅಧ್ಯಾಯದಲ್ಲಿ ಅವರು ಸಮಕಾಲೀನ ಮಹಿಳಾ ಅಧ್ಯಯನ, ಸ್ತ್ರೀವಾದಿ ಚಿಂತನೆ, ಮಹಿಳಾ ಚಳವಳಿಯ ಎದಿರು ಇರುವಂತಹ ಕೆಲವು ಪ್ರಮುಖ ಪ್ರಶ್ನೆಗಳ ಬಗ್ಗೆ ಚರ್ಚಿಸುತ್ತಾರೆ. ಭಾರತೀಯ ಸಂದರ್ಭದಲ್ಲಿ ಸ್ತ್ರೀವಾದವನ್ನು ವಿಶ್ಲೇಷಿಸುತ್ತಾರೆ. ಸ್ತ್ರೀವಾದಿ ರಾಜಕೀಯವು ಪ್ರತಿರೋಧ ಕೇಂದ್ರಿತವಾಗಿದ್ದು, ಪುರುಷ ಪ್ರಧಾನತೆಗೆ ಸವಾಲು ಎಸೆಯುವ, ಮಹಿಳೆಯ ಸಂವೇದನೆಯ ಭಿನ್ನತೆಯನ್ನು ಗುರುತಿಸುವ ಪ್ರಯತ್ನವನ್ನು ಸ್ತ್ರೀವಾದಿ ರಾಜಕೀಯ ಮಾಡುತ್ತದೆ. ಜಾತಿ, ಧರ್ಮ, ಜನಾಂಗ, ಪ್ರಾದೇಶಿಕತೆಯನ್ನು ಸ್ತ್ರೀವಾದಿ ವಿಶ್ಲೇಷಣೆಯು ಚರ್ಚಿಸುತ್ತ 'ಅಧಿಕಾರ'ವೆಂಬುದನ್ನು ಸಂಕೀರ್ಣವಾಗಿ ಗ್ರಹಿಸುತ್ತದೆ. ಆದರೆ ಈ ಗ್ರಹಿಕೆಯೊಳಗೆ ಸುಲಭವಾಗಿ ದಕ್ಕುವಂತಹುದಲ್ಲ. ಅದರಿಂದಾಗಿ ಈ ವಿಶ್ಲೇಷಣೆಯಲ್ಲೇ ಹಲವಾರು ವಿರೋಧಭಾಸಗಳು, ತೊಡಕುಗಳು ಕಾಣುತ್ತವೆ. ಜಾತಿ, ಲೈಂಗಿಕತೆ, ಮಹಿಳೆಯ ದೇಹದ ಬಗೆಗಿನ ಚರ್ಚೆಗಳನ್ನು ಗಮನಿಸಬಹುದು. ಪ್ರತಿರೋಧ ಹಾಗೂ ಪ್ರತಿಭಟನೆಯೇ ಅದರ ಕೇಂದ್ರ ಬಿಂದು. ಸ್ತ್ರೀವಾದಿ ನೆಲೆಯು 'ಪರ- ವಿರುದ್ಧ, ಸ್ವೀಕಾರ-ತಿರಸ್ಕಾರ'ಗಳಾಚೆ ಬೇರೆ ನೆಲೆಗಳನ್ನು ಕಂಡುಕೊಳ್ಳ ಬೇಕಾದ ಪ್ರಾಮುಖ್ಯವನ್ನು ಪುಸ್ತಕದ ಕೊನೆಯ ಅಧ್ಯಾಯ ಚರ್ಚಿಸುತ್ತದೆ. ಸ್ತ್ರೀವಾದಿ ಕಥನವು ಕೇವಲ ಸಿಟ್ಟು, ನೋವು,

**ಮಹಿಳಾ ಅಧ್ಯಯನ–ಸಮಾಜಶಾಸ್ತ್ರೀಯ ದೃಷ್ಟಿಕೋನ**

ಲೇ : ಸುಧಾ ಸೀತಾರಾಮನ್

ಪ್ರ : ಸ್ತ್ರೀಲೇಖ ಬೆಂಗಳೂರು 2010

ಬೆಲೆ : ರೂ. 200/-



ಶೋಷಣೆಯ ಬಗ್ಗೆಯೇ ಆಗಿರದೆ, ಸ್ತ್ರೀವಾದಿ ತಾತ್ವಿಕ ಸಿದ್ಧಾಂತದೆಡೆಗೆ (ಮೆಟಾಫಿಸಿಕ್ಸ್), ಸ್ತ್ರೀವಾದಿ ಉಥೋಪಿಯಾದೆಡೆಗೆ ಹೋಗಬೇಕೆ?

ಸ್ತ್ರೀವಾದಿ ಚಿಂತನೆಯ ಬಹಳ ಪ್ರಮುಖವಾದ ಇನ್ನೊಂದು ಪರಿಕಲ್ಪನೆ ಮಹಿಳೆಯರ 'ಏಜೆನ್ಸಿಗೆ' ಸಂಬಂಧಿಸಿದ್ದು. ಮಹಿಳೆಯ ಏಜೆನ್ಸಿ ಎಂಬುದನ್ನು ಸಾಮಾನ್ಯವಾಗಿ ಮಹಿಳೆಯರು ಎಲ್ಲಾ ಅಡೆತಡೆಗಳ ನಡುವೆಯೂ ತನ್ನ ಹಿತಾಸಕ್ತಿಯನ್ನು ಕಾಪಾಡಿಕೊಳ್ಳುವ ಪರಿಯೆಂದು ಅರ್ಥೈಸಲಾಗುತ್ತದೆ. ಸ್ತ್ರೀವಾದಿ ಚರ್ಚೆಗಳಲ್ಲಿ ಮಹಿಳೆಯ ಸ್ವಯಿಚ್ಛೆ ಇಲ್ಲವೆ ಮುಕ್ತ ಇಚ್ಛೆಯನ್ನು ಏಜೆನ್ಸಿ ಎಂಬುದಾಗಿ ಹೇಳಲಾಗುತ್ತದೆ. ಸ್ತ್ರೀವಾದಿ ಚಿಂತನೆಯ ತಳಹದಿಯಾಗಿರುವ ಈ ಉದಾರವಾದಿ ಸ್ವಾಯತ್ತತೆಯ ಪರಿಕಲ್ಪನೆಯನ್ನು ಮರು ಚಿಂತಿಸಬೇಕಾಗಿದೆ ಎಂದು ಸುಧಾ ಹೇಳುತ್ತಾರೆ. ಭಾರತದ ಮಹಿಳೆಯರ ಬದುಕು ಸಮುದಾಯ, ಜಾತಿ, ಧರ್ಮಗಳಲ್ಲಿ ಹುದುಗಿ ಹೋಗಿರುವುದಾಗಿದೆ. ಭಾರತೀಯ ಮಹಿಳೆಯರ ಅಸ್ಮಿತೆಗಳ ಬಗ್ಗೆ ಇನ್ನೂ ಆಳವಾದ ಚಿಂತನೆ ಆಗಬೇಕಾಗಿದೆ. ಸಮಕಾಲೀನ ತುರ್ತುಗಳಾಚೆ ಮಹಿಳಾ ಅಧ್ಯಯನದ ಒಟ್ಟಾರೆ ಒತ್ತಾಸೆ ಏನಾಗಿರಬೇಕೆಂಬ ಮುಖ್ಯ ಪ್ರಶ್ನೆಯನ್ನು ಕೃತಿಯು ತನ್ನ ಕೊನೆಯ ಅಧ್ಯಾಯದಲ್ಲಿ ಕೇಳುತ್ತದೆ. ಇತ್ತೀಚಿನ ದಿನಗಳಲ್ಲಿ ಬಲಗೊಳ್ಳುತ್ತಿರುವ ಬಲಪಂಥೀಯ ವಿಚಾರಗಳು, ಜಾಗತೀಕರಣದ ಪ್ರಭಾವಗಳ ಮಧ್ಯದಲ್ಲಿ ಸ್ತ್ರೀವಾದ, ಧರ್ಮ ಹಾಗೂ ಸಂಸ್ಕೃತಿಯ ಕುರಿತಾಗಿ ಇನ್ನಷ್ಟು ಗಂಭೀರವಾದ ವೈಚಾರಿಕ ಸಂವಾದದಲ್ಲಿ ತೊಡಗಬೇಕಾಗಿರುವ ತುರ್ತನ್ನು ಈ ಕೃತಿಯು ಒಡ್ಡುತ್ತದೆ. ಧರ್ಮದ ವಿಚಾರವನ್ನು ಮಾತನಾಡುವಾಗಲೂ ಸಹ, ಹೆಚ್ಚಿನ ಚರ್ಚೆಗಳು ಧರ್ಮವನ್ನು ಒಂದು ಸಿದ್ಧಾಂತವೆಂದು ಇಲ್ಲವೆ ಮೂಲಭೂತವಾದದ ಹಿನ್ನೆಲೆಯಲ್ಲೇ ಚರ್ಚಿಸಲಾಗುತ್ತದೆ. ಆದರೆ ಸಾಂಸ್ಕೃತಿಕ ಪರಂಪರೆಯಲ್ಲಿ ಮಹಿಳೆಯರ ಅನುಭವಗಳನ್ನು ಗ್ರಹಿಸಲು ನಮ್ಮ ವೈಚಾರಿಕ ಚೌಕಟ್ಟುಗಳನ್ನು ವಿಸ್ತರಿಸಿಕೊಳ್ಳಬೇಕಾಗುತ್ತದೆ. ಪಶ್ಚಿಮದ ಸ್ತ್ರೀವಾದಿ ತಾತ್ವಿಕತೆಯ ಚೌಕಟ್ಟುಗಳನ್ನು ನಿರಾಕರಿಸುವುದರ ಜೊತೆ ಜೊತೆಗೇ ದೇಸೀಯವಾದ ಕಲ್ಪನೆಗಳನ್ನು ಹೇಗೆ ಕಟ್ಟಿಕೊಳ್ಳಬೇಕು? ಅದರ ನೆಲೆಗಳು ಏನು? ಹೀಗೆ ಪರಿಕಲ್ಪನಾತ್ಮಕವಾಗಿ ಭಾರತೀಯ ಸ್ತ್ರೀವಾದದ ಮುಂದಿರುವ ಕೆಲವು ಮುಖ್ಯ ಸವಾಲುಗಳನ್ನು ಪ್ರಸ್ತುತವಾದ ವಿಚಾರಗಳನ್ನು ಈ ಕೃತಿಯು ಚರ್ಚಿಸುತ್ತದೆ.

ಸ್ತ್ರೀಲೇಖ ಅವರು ಅಂದವಾಗಿ ಪ್ರಕಟಿಸಿರುವ ಈ ಪುಸ್ತಕ ಸಮಕಾಲೀನ ಮಹಿಳಾ ಅಧ್ಯಯನ ಹಾಗೂ ಸ್ತ್ರೀವಾದಿ ಚಿಂತನೆಗೆ ಅರ್ಥಪೂರ್ಣ ಕೊಡುಗೆಯಾಗಿದೆ. ❑

ಪ್ರತಿ ಒಂದು ಲಕ್ಷ ಶಿಶು ಜನನಗಳಲ್ಲಿ ಕನಿಷ್ಠ 500 ಮಹಿಳೆಯರು ಈ ದೇಶದಲ್ಲಿ ಮರಣಿಸುತ್ತಾರೆ. ಮಾತೃ ಮರಣದ ಅತ್ಯುಚ್ಚ ಪ್ರಮಾಣ "ಅಭಿವೃದ್ಧಿ" ಹೊಂದಿದ್ದೇವೆ ಎಂದು ಹೇಳಿಕೊಳ್ಳಬಯಸುವ ದೇಶದಲ್ಲೆ ಕಾಣಿಸುತ್ತಿರುವುದು ಒಪ್ಪತಕ್ಕ ಸಂಗತಿಯಲ್ಲ.

• • •

ಕೈಗಾರಿಕೀಕೃತ ದೇಶಗಳಲ್ಲಿ ಟೌನ್‌ಶಿಪ್, ಉಪನಗರಗಳ ನಿರ್ಮಿತಿ ಎಂದರೆ ಶ್ರೀಮಂತರು ನಗರಗಳನ್ನು ಬಿಟ್ಟು ಹೊರವಲಯದಲ್ಲಿ ನೆಲೆಸಿ ದುಡಿಯ ಬಯಸುತ್ತಾರೆ. ಆದರೆ ನಮ್ಮ ಇಂಡಿಯಾದಲ್ಲಿ ಫ್ಲೈಓವರ್‌ಗಳು, ಸ್ಟಾರ್‌ಹೋಟೆಲ್‌ಗಳು, ವಿಮಾನ ನಿಲ್ದಾಣಗಳು, ಕ್ರೀಡಾಸೌಕರ್ಯಗಳು, ಶಾಪಿಂಗ್ ಮಾಲ್‌ಗಳ ನಿರ್ಮಾಣಕ್ಕಾಗಿ ಬಡವರ್ಗದ ಜನಗಳ ಮನೆಗಳನ್ನು ಕೆಡವಿ, ಅವರನ್ನು ನಿರ್ವಸತಿಗೊಳಿಸಿ ದೂರ ಅಟ್ಟಿ ಊರಾಚೆಗೆ ಓಡಿಸಲಾಗುತ್ತದೆ.

–ಕಲ್ಪನಾ ಶರ್ಮ



## ಪಾಪಿಗಳ ಲೋಕದಲ್ಲಿ

ಜಾಹಿರಾತು ಕೊಡುತ್ತಾಳೆ ಅವಳು
ಇಪ್ಪತ್ತೆರಡು ವರ್ಷದ ಕನ್ಯೆ
ಶ್ರೀಮಂತ ಅಮೆರಿಕಾದ ಮಗಳು.
"ನನ್ನ ಹೆಸರು ಬ್ರುನೆಟ್
ನನಗೀಗ ಇಪ್ಪತ್ತೆರಡು ವಯಸ್ಸು
ಅಮೆರಿಕಾದ ಮಗಳು ನಾನು
ನನ್ನ ಕನ್ಯತ್ವ ಪರಿಶುದ್ಧ
ಅದಕ್ಕಿದೆ ವೈದ್ಯರ ಪ್ರಮಾಣಪತ್ರ
ಯಾರಾದರು ಕೊಳ್ಳುತ್ತೀರಾ?
ಬನ್ನಿ ಹೆಚ್ಚಿನ ಬಿಡ್ಡುದಾರರೇ
ಅತೀ ಹೆಚ್ಚು ಹಣನೀಡುವವರ
ಜೊತೆ ಮಲಗಲು ಸಿದ್ಧಳಿದ್ದೇನೆ."
ಇದು ಯಾಕೆ ಎನ್ನುತ್ತೀರಾ?
"ನಾನು ಸ್ನಾತಕೋತ್ತರ ಪದವಿಗೆ
ಓದಲು ಅಪಾರ ಹಣ ಬೇಕಾಗಿದೆ."
ಮಹಿಳೆಯರ ಮಾನವನ್ನೂ ಬಿಡದೇ
ಎಲ್ಲವನ್ನೂ ಸರಕಾಗಿಸುವ
ಬಂಡವಾಳಿಗರ ಮಾರುಕಟ್ಟೆಯಲ್ಲಿ
ಶಿಕ್ಷಣವೂ ಸರಕು. ಖಾಸಗೀಕರಣದ
ಪರಿಣಾಮ ಕನ್ಯತ್ವವೂ ಸರಕು.
ಶೀಲ ಉಳಿಸಲು ಸಹಗಮನ
ಮಾಡಿಸಿದ ಸನಾತನಿಗಳೇ
ದೇವಿಯೆಂದು ಪೂಜಿಸುವವರೇ
ಬನ್ನಿ ಅವಳ ಮಾನ ಕಾಪಿಡಬಲ್ಲಿರಾ?
ಡಾಲರ್ ದೊರೆಗಳ ನಿಜದ ದರ್ಶನ
ಈಗಲಾದರೂ ಆಗುವುದೇ ನಿಮಗೆ?
ಇಂದು ಅಮೆರಿಕಾ–ನಾಳೆ ಭಾರತ
ಖಾಸಗೀಕರಣದ ಪರಿಣಾಮ
ಎಂತಹ ಕರಾಳ?

■ ಡಾ. ಕೆ. ಷರೀಫಾ

# ಭಾಷೆ, ಮತ್ತು ಸಂಸ್ಕೃತಿನಾಶ

■ *ತಿರುಮಲಾಂಬಾ*

ಇಂದಿನ ಜಾಗತೀಕರಣದ ಪ್ರಕ್ರಿಯೆಯ ಎದುರಲ್ಲಿ ದೇಶಭಾಷೆಗಳೆಲ್ಲ ತಮ್ಮ ಸ್ವತಂತ್ರ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತಿರುವ ಪರಿಸ್ಥಿತಿ ಇದೆ. ಇಂತಹ ಪರಿಸ್ಥಿತಿಯಲ್ಲಿ ಒಂದು ಶತಮಾನದ ಹಿಂದೆ ಆಂಗ್ಲಭಾಷೆಯು ಕನ್ನಡವನ್ನು ಹೇಗೆ ನಾಶಪಡಿಸುತ್ತಿದೆ ಎಂದು ಗಾಢವಾಗಿ ತಮ್ಮ ಕಳವಳವನ್ನು ಪ್ರಕಟಿಸಿದ ತಿರುಮಲಾಂಬಾ ಅವರ ವಿಚಾರ ಮತ್ತೆ ಮತ್ತೆ ನಮ್ಮನ್ನು ವಿಚಾರಮಾಡಲು ಪ್ರೇರೇಪಿಸುವಂತಿದೆ.

"ನಮಗೆ ಕನ್ನಡವೇ ಮಾತೃಭಾಷೆಯಾಗಿರಲು ಅದು ಹೇಗಾದರೂ ಬರುವುದೆಂದು ನೆನೆಸಿ ಅದನ್ನು ಕಲಿಯಲು ನಾವು ಉಪೇಕ್ಷಿಸುತ್ತಿರುವೆವು. ನಮ್ಮಲ್ಲಿ ಹುಟ್ಟುಕನ್ನಡಿಗರಾಗಿ ಈಗ ಬೇರೆ ಬೇರೆ ಮಾತುಗಳನ್ನಾಡುವ ವಿದ್ಯಾರ್ಥಿಗಳಿಗೆ ಕನ್ನಡವೇ ಬೇಡವೆಂದು ಹೇಳಿ ಅದನ್ನು ಕಡೆಗಣ್ಣಿನಿಂದಲೂ ನೋಡಲು ಹಿಂದೆಗೆಯುವವರೂ ಉಂಟಾದರು. ಹೀಗಾಗಿ ಕನ್ನಡವು ಎಲ್ಲರಿಂದಲೂ ಉಪೇಕ್ಷಿಸಲ್ಪಟ್ಟು ಈ ಸ್ಥಿತಿಯಲ್ಲಿರಬೇಕಾಗಿದೆ. ಆದುದರಿಂದ ವಿದ್ಯಾರ್ಥಿಗಳಲ್ಲಿ ಸಾಧ್ಯವಾದಷ್ಟು ಮಟ್ಟಿಗೂ ಮನಸ್ಸು ಕೊಟ್ಟು ಕನ್ನಡವನ್ನು ಕಲಿಯಬೇಕೆಂಬುದನ್ನು ನಾವು ನೆನಪಿನಲ್ಲಿಟ್ಟಿರಬೇಕು, ಮತ್ತು ನಮ್ಮ ನಾಡು ನುಡಿಯ ಏಳ್ಗೆಗೆ ನಾವು ಮುಂದಿನ ಉಪಾಯಗಳನ್ನು ಮಾಡಬೇಕಾದುದು ಅವಶ್ಯಕವೆಂದು ತಿಳಿಯಬೇಕು." ಎಂದು ಸಾರುವ ತಿರುಮಲಾಂಬಾ 'ಕರ್ನಾಟಕ ನಂದಿನಿ'ಯ 3ನೆಯ ಸಂಪುಟ, 5ನೆಯ ಸಂಚಿಕೆಯಲ್ಲಿ 1923ರಲ್ಲಿ ಕನ್ನಡವನ್ನು ಊರ್ಜಿತಗೊಳಿಸಲು ಈ ಉಪಾಯಗಳನ್ನು ಸೂಚಿಸುತ್ತಾರೆ. ಬೆಳೆಯುವ ವಿದ್ಯಾರ್ಥಿಗಳಿಗೆ ಅವರು ನೀಡುವ ವಿಶೇಷ ಸೂಚನೆಗಳಿವು;

1. ಈಗಿನ ಕಾಲದಲ್ಲಿ ಕಾಗದ ಪತ್ರಗಳು ಹೆಚ್ಚಾಗಿ ಇಂಗ್ರೇಜಿಯಲ್ಲೇ ನಡೆಯುವುದಲ್ಲದೆ ಸ್ವಲ್ಪ ಇಂಗ್ಲಿಷು ಗೊತ್ತಿದ್ದರೆ ಕೂಡ ಕನ್ನಡದಲ್ಲಿ ನಡೆಯುವುದಿಲ್ಲ. ಹೀಗೆ ಮಾಡದೆ ವಿದ್ಯಾರ್ಥಿಗಳು ಕನ್ನಡದಲ್ಲೇ ಕಾಗದ ಪತ್ರಗಳನ್ನು ನಡೆಸಬೇಕು. ಅಲ್ಲದೆ ಪರಸ್ಪರ ಸಂಭಾಷಣೆಗಳನ್ನೂ ಕನ್ನಡದಲ್ಲೇ ನಡೆಸಬೇಕು.
2. ವಿದ್ಯಾರ್ಥಿಗಳಿಗೆ ಕನ್ನಡಭಾಷಾ ಪರಿಜ್ಞಾನವಾಗಬೇಕಾದರೆ ಒಳ್ಳೊಳ್ಳೆಯ ಕನ್ನಡ ಕಾದಂಬರಿಗಳನ್ನೂ ಮಾಸಿಕಗಳನ್ನೂ ಓದಬೇಕು... ಮೊದಲು ನಮ್ಮ ನಾಡುನುಡಿಗೆ ಅಗ್ರ ಮರ್ಯಾದೆಯನ್ನು ಮಾಡಿ ಆ ಬಳಿಕ ಇತರ ಭಾಷೆಗಳ ಕಡೆಗೆ ನೋಡುವುದನ್ನು ಕಲಿಯಬೇಕು.
3. ಕನ್ನಡವು ನಮ್ಮ ತಾಯ್ನುಡಿ. ತಾಯ್ನುಡಿಯನ್ನು ಮೊದಲು ಮಾಡಿ ಅದನ್ನು ಕಷ್ಟಪಟ್ಟು ಕಲಿಯಬೇಕು. ತಾಯ ಹಾಲನ್ನು ಕುಡಿದೇ ಮಕ್ಕಳು ಪುಷ್ಟವಾಗಿ ಬೆಳೆದು ಆಮೇಲೆ ಇತರ ಆಹಾರಗಳನ್ನು ತೆಗೆದುಕೊಳ್ಳುವ ಚೈತನ್ಯವನ್ನು ಪಡೆಯುವಂತೆ ಮಾತೃಭಾಷೆಯ ಬಲದಿಂದ ನಾವು ಚೆನ್ನಾಗಿ ಬೆಳೆದು ಅದರ ಸವಿಯನ್ನು ತಿಳಿಯಲು ಇತರ ಭಾಷೆಗಳನ್ನು ಕಲಿಯಬೇಕು. ಎಂದರೆ ನಮಗೆ ಕನ್ನಡವೇ ಮುಖ್ಯ ಭಾಷೆಯಾಗಿಯೂ ರಾಜಭಾಷೆಯಾದ ಇಂಗ್ಲಿಷು ಎರಡನೆಯದಾಗಿಯೂ ಇರಬೇಕು. ಎಂದು ಕಳೆದ ಶತಮಾನದ ಆರಂಭದಲ್ಲೇ ತಿರುಮಲಾಂಬಾ ಒತ್ತಿ ಹೇಳಿದ್ದುದು ಗಮನಾರ್ಹ.

ಕನ್ನಡಿಗರ ಅನ್ಯಭಾಷಾ ಪ್ರೇಮದ ಬಗ್ಗೆ ಅವರು ಹೇಳಿದ ಮಾತು ಶತಮಾನದನಂತರವೂ ಇಂದೂ ಅರ್ಥವತ್ತಾಗಿ ಕಾಣುತ್ತದೆ.

"ನಮ್ಮ ಕನ್ನಡಿಗರು ಚಿಕ್ಕಂದಿನಿಂದಲೂ ಕನ್ನಡವನ್ನು ಒಗೆದು ಇಂಗ್ಲಿಷನ್ನೇ ಹೆಚ್ಚಾಗಿ ಪ್ರೀತಿಸುತ್ತಿರುವುದರಿಂದ ಇವರಲ್ಲಿ ಸ್ವಾಭಿಮಾನವು ಹುಟ್ಟುವುದಿಲ್ಲ. ಈ ಬುದ್ಧಿಯು ಕನ್ನಡಿಗರ ಹೊರತು ಇತರ ಭಾಷೆಗಳನ್ನಾಡುವವರಲ್ಲಿಲ್ಲ. ಉದಾಹರಣೆಗೆ ಮರಾಠರನ್ನು ನೋಡಬಹುದು.... ಬಂಗಾಳಿಗಳು ಮರಾಠರಿಗೆ ಕಡಿಮೆಯವರೇನೂ ಅಲ್ಲ. ಇವರು ತಮ್ಮ ದೇಶ ಭಾಷೆಗಳನ್ನು ತಮ್ಮ ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸುವರು. ದೇಶಕ್ಕಾಗಿ ತಮ್ಮ ಸರ್ವಸ್ವವನ್ನೂ ಒಪ್ಪಿಸುವವ ರಾಗಿರುವರು. ಆದರೆ ನಮ್ಮ ಕನ್ನಡಿಗರೋ?"

"ನಮ್ಮ ಭಾಷೆಯಾದ ಕನ್ನಡವು ಒಂದು ಕಡೆಯಲ್ಲಿ ಹೊರಳುತ್ತಿರುವುದು. ಒಂದೆಡೆ ಮಾತೃದೇಶವು ನಮ್ಮ ಕಣ್ಣೆದುರಿನಲ್ಲಿಯೇ ನರಳುತ್ತಿರುವುದು. ದೇಶ ಮತ್ತು ಭಾಷೆಗಳ ಈ ದೀನಸ್ಥಿತಿಯನ್ನು ನೋಡಿಯೂ ನಾವು ಸುಮ್ಮನೆ ಕುಳಿತು ಕೊಂಡಿರುವುದು ಯೋಗ್ಯವೆ?" ಎಂಬ ತಿರುಮಲಾಂಬಾ ಅವರ ಪ್ರಶ್ನೆ ಇಂದು ಭಾರತದಲ್ಲಿ ಪ್ರತಿಯೊಂದು ಪ್ರದೇಶದವರೂ ಕೇಳಕೊಳ್ಳಬಹುದಾದ ಪ್ರಶ್ನೆಯಾಗಿದೆ. ❑

# ನಾನು, ನೀನು ಮತ್ತು ಕೌದಿ

■ ಕೆ. ನೀಲಾ

ಯವ್ವsss  
ನಂಗ, ನಿನ್ನ ಮೊನ್ನ ನಡದಂಗೆ ನೆಂಪದ  
ನಿ ಕೌದಿ ಹೂಲ್ಯಾಗ  
ನಿನ್ನ ಮುಂದ ನಾ ಕುಂತು  
ಬದುಕಿನ ಆಸಿಗೊಳ ಹಗ್ಗ ಹೊಸ್ದಿದ್ದೆ  
ನನ್ನ ಮುಂದ ನೀ ಕುಂತು  
ನಿನ್ನ ಬಯಕಿ ಭಾವನೆ ಗೋಳಿಗೆಲ್ಲ  
ತುಂಡು ಬಟ್ಟೆಲಿಂದ ಹೊಲ್ದು ಹೊಲ್ದೂ  
ಮುಚ್ಚಿಟ್ಟಿದ್ದಿ ನಂಗೂ ತಿಳೀಲಾರ್ದಂಗ ಬಿಕ್ಕಿದ್ದಿ

ಆ ಕೌದಿ ಹರ್ದು ಗುಟ್ಟು  
ರಟ್ಟಾಗ್ಬಾರ್ದೂಂತ ನೀ ಅಂತಿ  
ಆ ಕೌದಿ ಹರ್ದು ಬಣ್ಣ  
ಬಯಲಾಗ್ಲೀಂತ ನಾ ಅಂತಿನಿ

*'ಬದುಕ ಬೀದಿಯ ಪಯಣ'ದಿಂದ*  
*ಕೃಪೆ : ಕ್ರಿಯಾ ಪ್ರಕಾಶನ, ಬೆಂಗಳೂರು*

Registered with Registrar of Newspapers of India under No. KARKAN/2007/22289
'NAMMA MANASA', REGD. No. : MAG(3) NPP/399(A) / 2006-07 KA/BGS/2074/2010-12

# ನಮ್ಮ ಮಾನಸ

- ಮಹಿಳೆಯರಿಗೆ ಸಂಬಂಧಿಸಿದ ಲೇಖನಗಳು, ವರದಿಗಳು ವಿಶ್ಲೇಷಣೆಗಳು, ವಿಮರ್ಶೆಗಳು, ಅನುಭವಗಳು, ಕತೆ-ಕವನಗಳನ್ನು ನಮ್ಮ ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ.
- ಪತ್ರಿಕೆಯು ವಿಷಯಾಧರಿತವಾಗಿದ್ದು, ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಮಹಿಳೆಯರ ಬದುಕಿನ ಮೇಲೆ ಪರಿಣಾಮ ಬೀರುವ ಸಾಮಾಜಿಕ, ರಾಜಕೀಯ, ಆರ್ಥಿಕ ವಿಚಾರಗಳನ್ನು ಚರ್ಚಿಸಲಾಗಿದೆ.
- ವಿವಾಹ, ಕುಟುಂಬದಂತಹ ಸಾಮಾಜಿಕ ಸಂಸ್ಥೆಗಳು, ಮನೆಗೆಲಸ, ಸಂಬಳರಹಿತ ದುಡಿಮೆ, ಆರ್ಥಿಕ ನೀತಿ, ಜಾತಿ, ವರ್ಗ, ಸೌಂದರ್ಯ, ಲಿಂಗ, ಹೆಣ್ತನ ಮುಂತಾದ ವಿಷಯಗಳನ್ನು ಚರ್ಚೆಗೊಳಪಡಿಸಿ ಪ್ರಕಟಿಸಲಾಗಿದೆ. ಗುತ್ತಿಗೆ ಪೌರಕಾರ್ಮಿಕರ ಹೋರಾಟಗಳಿಗೆ ಸ್ಪಂದಿಸಿ ಲೇಖನಗಳನ್ನು ಪ್ರಕಟಿಸಿದೆ.
- ಆರೋಗ್ಯ, ಲೈಂಗಿಕತೆ, ಅಪಾಯಕಾರೀ ಗರ್ಭ ನಿರೋಧಕಗಳು, ಆರ್ಥಿಕತೆ ಮತ್ತು ಅಭಿವೃದ್ಧಿ, ಅಭಿವೃದ್ಧಿ ಯೋಜನೆಗಳು ಮುಂತಾದ ವಿಚಾರಗಳನ್ನು ವಿಮರ್ಶೆಗೊಳಪಡಿಸಲಾಗಿದೆ.
- ಅಣ್ವಸ್ತ್ರೀಕರಣ, ಮಿಲಿಟರೀಕರಣ, ಜಾಗತೀಕರಣದಂಥ ಬೆಳವಣಿಗೆಗಳನ್ನು ಮಹಿಳಾ ದೃಷ್ಟಿಕೋನದಿಂದ ಪ್ರಶ್ನಿಸಲಾಗಿದೆ.
- ಇತರ ಪ್ರಜಾಸತ್ತಾತ್ಮಕವಾದ ಸಂಘಟನೆಗಳೊಡನೆ ಕೋಮುವಾದ, ಸಮಾನ ನಾಗರಿಕ ಸಂಹಿತೆ, ಮೀಸಲಾತಿ, ಲೈಂಗಿಕತೆ, ಪರಿಸರ, ಸ್ಥಳಾಂತರ ಮುಂತಾದ ವಿವಾದಗಳನ್ನು ಕುರಿತ ಚರ್ಚೆಗಳಲ್ಲಿ, ಆಂದೋಲನಗಳಲ್ಲಿ ಪಾಲ್ಗೊಳ್ಳಲಾಗಿದೆ.
- ಸ್ವಸಹಾಯ ಸಂಘಗಳನ್ನು ರಚಿಸುವ ಮೂಲಕ ಮಹಿಳೆಯರ ಸಬಲತೆಗೆ ಪ್ರೋತ್ಸಾಹ ನೀಡಲಾಗಿದೆ.
- ನಮ್ಮದೇ ಮಿತಿಯಲ್ಲಿ ತೊಂದರೆಗೊಳಗಾದ ಮಹಿಳೆಯರಿಗೆ ಸಲಹೆ, ನೈತಿಕ ಬೆಂಬಲಗಳಲ್ಲದೆ ಕಾನೂನಿನ ನೆರವನ್ನು ನೀಡುತ್ತಿದ್ದೇವೆ.
- ಮಹಿಳೆಯರು ತಾವಿದ್ದೆಡೆಯಲ್ಲಿ ಮಹಿಳಾ ಪತ್ರಿಕೆಗಳನ್ನು ಹೊರತರಲು ಪ್ರಯತ್ನಿಸಿದಲ್ಲಿ, ಗುಂಪುಗಳನ್ನು ರಚಿಸಬೇಕಾದಲ್ಲಿ ಸಹಕರಿಸಲು ಉದ್ದೇಶಿಸಿದ್ದೇವೆ.

Registered Magazine

*Posted on 9th of every month at MBC, Bangalore GPO*
*Total No. of Pages: 24*

ವಿಳಾಸ :
ನಮ್ಮ ಮಾನಸ
114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ
ಬೆಂಗಳೂರು - 560 018